










# ಸಿದ್ಧಗಂಗಾ

ಡಿಸೆಂಬರ್
**1971**



m.c.veer

# ಸಿದ್ಧಗಂಗಾ

[ತ್ರೈಮಾಸಿಕ]

ಸಂಪುಟ ೭ ಸಂಚಿಕೆ ೪

ಡಿಸೆಂಬರ್

೧೯೭೧

## ಸಿದ್ಧಗಂಗಾ

**ಸಂಪಾದಕ ಮಂಡಳಿ :**

ಚನ್ನಪ್ಪ ಎರೇಸೀಮೆ
(ಪ್ರಧಾನ ಸಂಪಾದಕ)
ಹಿ. ಚಿ. ಶಾಂತವೀರಯ್ಯ, ಎಂ.ಎ , ಬಿ.ಇಡಿ,
ಟಿ. ಆರ್. ಮಹದೇವಯ್ಯ, ಎಂ.ಎ.
ಆರ್. ರಾಚಪ್ಪ, ಎಂ.ಎ.
ಎಂ. ರೇಣುಕಾರಾಧ್ಯ

ಪ್ರಕಾಶಕರು :—

ಹಳೆಯ ವಿದ್ಯಾರ್ಥಿಯ ಸಂಘ,
ಶ್ರೀ ಸಿದ್ಧಗಂಗಾ ಕ್ಷೇತ್ರ,
ಪರವಾಗಿ H. B. ಗಂಗಾಧರಯ್ಯ,
ಬಿ.ಎಸ್‌ಸಿ., ಬಿ.ಇಡಿ.

ಮುದ್ರಕರು :—

ಶ್ರೀಮತಿ H. C. ಗೌರಮ್ಮ
ಶ್ರೀ ನಿರಂಜನ ಪ್ರಿಂಟರ್ಸ್,
"ಶ್ರೀ ಶಿವಕುಮಾರ ಕೃಪಾ"
411, 6ನೇ ಬ್ಲಾಕ್, ರಾಜಾಜಿನಗರ,
ಬೆಂಗಳೂರು-10.

ಪತ್ರಿಕೆ ಪ್ರಕಟವಾಗುವ ಸ್ಥಳ :—

**ಶ್ರೀ ಸಿದ್ಧಗಂಗಾ ಕ್ಷೇತ್ರ**

**ಪತ್ರಿಕೆ ಹೊರಡುವ ಮಾಸಗಳು :—**

ಮಾರ್ಚ್, ಜೂನ್, ಸೆಪ್ಟೆಂಬರ್, ಡಿಸೆಂಬರ್.


### ಚಂದಾ ವಿವರ

| | | |
|---|---|---|
| ಬಿಡಿ ವಿಶೇಷ ಸಂಚಿಕೆ | .... | 1-50 |
| ಬಿಡಿ ಸಾಮಾನ್ಯ ಸಂಚಿಕೆ | .... | 1-25 |
| ವಾರ್ಷಿಕ ಚಂದಾ | .... | 5-00 |

ಬಿಡಿ ಸಂಚಿಕೆಗಳ ಅಂಚೆ ವೆಚ್ಚ ಪ್ರತ್ಯೇಕ
ಚಂದಾದಾರರಿಗೆ ಅಂಚೆ ವೆಚ್ಚವಿಲ್ಲ.

### ಮಾನ್ಯ ಚಂದಾದಾರರಲ್ಲಿ ವಿನಂತಿ.

ಈ ಸಾಲಿನ ಚಂದಾ ಹಣ ಕೊಡಬೇಕಾದವರು M. O. ಮೂಲಕ ಪ್ರಕಾಶಕರು, ಶ್ರೀ ಸಿದ್ಧಗಂಗಾ ತ್ರೈಮಾಸಿಕ, ಸಿದ್ಧಗಂಗಾ ಮಠ, ತುಮಕೂರು ಜಿಲ್ಲಾ, ಇವರಿಗೆ ಕಳುಹಿಸಿ ಪತ್ರಿಕೆಯ ಸರ್ವತೋಮುಖ ಪ್ರಗತಿಗೆ ನೆರವಾಗಬೇಕಾಗಿ ಪ್ರಾರ್ಥನೆ.

ರಾಜ್ಯ ಸರಕಾರದ ವಿದ್ಯಾ ಇಲಾಖೆಯ ಡೈರೆಕರ್ ಅವರು CL47-4|65-66 ತಾ|| 29-4-66ನೆಯ ಆರ್ಡರ್ ಪ್ರಕಾರ ಪ್ರಾಥಮಿಕ ಶಾಲೆ, ಪ್ರೌಢಶಾಲೆ, ಶಿಕ್ಷಣ ಶಾಲೆಗಳು ಹಾಗೂ ಸಾರ್ವಜನಿಕ ಗ್ರಂಥ ಭಂಡಾರಗಳು ಕೊಂಡುಕೊಳ್ಳಬಹುದೆಂದು ಆಜ್ಞೆ ಹೊರಡಿಸಿದ್ದಾರೆ.

# ಈ ಸಂಚಿಕೆಯಲ್ಲಿ

# ಶ್ರೀವಾಣಿ

## ಪ್ರಧಾನಮಂತ್ರಿ ಭಾರತರತ್ನ ಶ್ರೀಮತಿ ಇಂದಿರಾ ಗಾಂಧಿಯವರ ದಿಟ್ಟ ನಿಲವು.

ಧರ್ಮವು 'ಮಾ ಹಿಂಸ್ಯಾತ್' ಎಂದು ಬೋಧಿಸುತ್ತದೆ ನಿಜ, ಆದರೆ ಇನ್ನೊಂದು ಸಮಯದಲ್ಲಿ ಅದನ್ನು ಪುಷ್ಟೀಕರಿಸುತ್ತದೆ. ಭಗವದ್ಗೀತೆಯು ಈ ಎರಡು ತತ್ತ್ವಗಳ ಮಥಿತಾರ್ಥವನ್ನು ಎತ್ತಿ ತೋರಿಸುತ್ತದೆ. ಹಿಂಸೆ ಯೆಂದು ಯಾವುದನ್ನು ಕರೆಯುತ್ತೇವೆಯೋ ಅದೇ ಅಹಿಂಸೆಯೂ ಆಗುತ್ತದೆ. ಆದರೆ ಇಲ್ಲಿನ ಧರ್ಮ ಸೂಕ್ಷ್ಮವನ್ನು ಮಾತ್ರ ಜಾಗ್ರತವಾಗಿ, ಸೂಕ್ಷ್ಮದೃಷ್ಟಿಯಿಂದ ಪರಿಶೀಲಿಸಬೇಕು. ಧರ್ಮವು ಅಧರ್ಮವನ್ನು ಗೆಲ್ಲುವಾಗ ಹಿಂಸೆ ಯನ್ನು ಅವಶ್ಯವಾಗಿ ಅನುಸರಿಸಲೇಬೇಕು. ಹಾಗಿಲ್ಲದಿದ್ದರೆ ಅಧೋಮುಖವಾಗಿ ಸಂಚರಿಸುವ ಇಂದ್ರಿಯ ಜಾಲ ವನ್ನು ಊರ್ಧ್ವಮುಖಗೊಳಿಸುವ ಮಾರ್ಗದಲ್ಲಿ ಅವುಗಳ ಮೂಲಭೂತ ಗುಣಗಳನ್ನು ಹುರಿಯುವುದೂ ಅಧರ್ಮವಾ ದೀತು. ಅದು ಹಾಗಲ್ಲ; ಸದ್ಧರ್ಮ ಸ್ಥಾಪನೆಗೆ ನ್ಯಾಯ ದೊರಕಿಸುವ ಕಾರ್ಯಕ್ಕೆ ಆಸುರೀ ಶಕ್ತಿಗಳ ಮೇಲೆ ದೈವ ಶಕ್ತಿಗಳ ದಾಳಿ ಅನಿವಾರ್ಯ. ಈ ಮಾತು ಪಿಂಡಾಂಡ ಪ್ರಪಂಚವ್ಯಾಪ್ತಿಗನುಗುಣವಾದದೆಂದು ಭಾವಿಸಲಾಗದು. ಹೊರಗಣ ಪ್ರಪಂಚಕ್ಕೂ ಅನಿವಾರ್ಯ. ಆಸುರೀ ಮನೋಭಾವದ ಜನಾಂಗಕ್ಕೆ ತಕ್ಕ ಬುದ್ಧಿಯನ್ನು ಕಲಿಸಲು ನ್ಯಾಯಸಮ್ಮತ ಧರ್ಮಯುದ್ಧ ಅಹಿಂಸೆಯೇ ಹೊರತು ಹಿಂಸೆಯಲ್ಲ. ಈ ಮಾತನ್ನು ಗೀತೆ, ಎತ್ತಿ ಹಿಡಿದಿದೆ; ಒಂದ ದೃಷ್ಟಿಯಿಂದ ಗೀತೆ ಹುಟ್ಟಿರುದು ಈ ಮಾತಿನ ಸ್ಪಷ್ಟತೆಗಾಗಿ.

'ಅಹೋಬತ ಮಹತ್ಪಾಪಂ ಕರ್ತುಂ ವ್ಯವಸಿತಾವಯಂ |
ಯದ್ರಾಜ್ಯಸುಖಲೋಭೇನ ಹಂತುಂಸ್ವಜನಮುದ್ಯತಾಃ"

ಎಂದು ಅರ್ಜುನನು ವ್ಯಾಕುಲಚಿತ್ತನಾಗಿ ಶಸ್ತ್ರಾಸ್ತ್ರತ್ಯಾಗಮಾಡಿ ರಥದ ಮೇಲೆ ಕುಳಿತಾಗ ಶ್ರೀಕೃಷ್ಣ 'ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಂ ! ಅನಾರ್ಯಜುಷ್ಟಮಸ್ವರ್ಗ್ಯಂ ಅಕೀರ್ತಿಕರಂ ಅರ್ಜುನ ?" ಎಂದು ಆಕ್ಷೇಪಿಸಿ 'ಕ್ಷುದ್ರಂ ಹೃದಯ ದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ" ಎಂದು ಬುದ್ಧಿ ಹೇಳಿ ಧರ್ಮಸೂಕ್ಷ್ಮ ವನ್ನು ತಿಳಿಸಿ ಅವನಿಂದ ಕೌರವ ಸೈನ್ಯ ನಾಶ ಮಾಡಿಸುತ್ತಾನೆ. ತತ್ತ್ವ ಪಾಲನೆಗೆ ನ್ಯಾಯನೆಮ್ಮದಿಗಳಿಗೆ ಹಿಂಸೆ ಅನಿವಾರ್ಯವಾಗುತ್ತದೆ, ಎಂಬುದು ಇದರಿಂದ ಸ್ಪಷ್ಟವಾಗಿ ವಿದಿತ.

'ಭಾರತ ರತ್ನ' ಪ್ರಧಾನ ಮಂತ್ರಿ ಶ್ರೀಮತಿ ಇಂದಿರಾ ಗಾಂಧಿಯವರು ಈಗತಾನೇ ವಿರಾಮಗೊಂಡ ಸುಮಾರು 13–14 ದಿನಗಳ ಮಿಂಚಿನ ಕಾಳಗದಲ್ಲಿ ಭಾರತಕ್ಕೆ ಅದ್ಭುತ ವಿಜಯ ಗಳಿಸಿಕೊಟ್ಟ ಯುದ್ಧದ ತತ್ತ್ವವೂ ಭಾರತದ ಪ್ರಾಚೀನ ಪರಂಪರೆಯ ಧರ್ಮಯುದ್ಧವನ್ನು ಜ್ಞಾಪಕಕ್ಕೆ ತರುತ್ತದೆ. ರಾಷ್ಟ್ರವನ್ನುದ್ದೇಶಿಸಿ ತಾ|| 12-12-1971 ರಂದು ಮಾಡಿದ ಪ್ರಸಾರಭಾಷಣ ಜಗತ್ತಿನ ಬಧಿರತೆ, ಅಂಧತೆಯನ್ನು ತೊಲಗಿಸುವ ಧೀರವಾಣಿ ಮತ್ತು ಧರ್ಮ ಸಮ್ಮತವೂ ಆತ್ಮಬಲ ವಿಶಿಷ್ಟವೂ ಆದ ಭಾರತದ ವಾಣಿ. ಇವರ ದಿಟ್ಟನಿಲುವಿಗಾಗಿ ನಾವೂ ಸಂತೋಷಿಸುತ್ತೇವೆ. ಅವರ ತಮ್ಮ ಸ್ಫೂರ್ತಿಯುತವೂ ವಿವೇಕಪೂರ್ಣವೂ ಆದ ನಾಯಕತ್ವದಲ್ಲಿ ಭಾರತದ ಕೀರ್ತಿ ಶಕ್ತಿಗಳೆರಡೂ ತನ್ನ ಮೂಲಭೂತ ಧ್ಯೇಯ ಧೋರಣೆಗಳ ಪಾಲನೆ ಮಾಡಬಲ್ಲುವೆಂಬ ವಿಶ್ವಾಸ ಸಮಗ್ರ ರಾಷ್ಟ್ರಕ್ಕೆ ಮನವರಿಕೆಯಾಗಿದೆ. ಶ್ರೀ ಮತಿ ಇಂದಿರಾಜಿಯವರು ತೋರಿದ ಈ ದಿಟ್ಟ ನಿಲುವಿಗಾಗಿ ರಾಷ್ಟ್ರಪತಿಯವರು ತಾರೀಖು 18-12-71 ರಂದು ಭಾರತರತ್ನ ಪದವಿಯನ್ನಿತ್ತು ಗೌರವಿಸಿದುದು ನಮಗೆ ಸಂತೋಷವಿತ್ತಿದೆ. ಪರಶಿವನು ಅವರಿಗೆ ನೂತನ ರಾಷ್ಟ್ರ ನಿರ್ಮಾಣದಲ್ಲಿ ಪ್ರಬಲ ಶಕ್ತಿಯನ್ನೀಯಲೆಂದು ಹಾರೈಸುತ್ತೇವೆ.

— ಶಿವಂ ಭೂಯಾತ್ —

# ಸಂಪಾದಕೀಯ

## ಭಾರತದ ವೀರಗರ್ಜನೆ

ನಾವು ಮಾಡುವ ಕರ್ತವ್ಯಗಳು ಅವುಗಳಿಗೆ ತಕ್ಕ ಫಲಗಳನ್ನು ತಪ್ಪದೆ ಕೊಡುತ್ತವೆ. ದುಷ್ಕೃತ್ಯಗಳು ನಮ್ಮನ್ನು ಭೂತ ಬೆನ್ನಟ್ಟಿದಂತೆ. ಸತ್ಕಾರ್ಯಗಳು ದೈವಾನುಗ್ರಹದಂತೆ. ಕಳೆದ ಒಂಬತ್ತು ತಿಂಗಳಿಂದ ಪಶ್ಚಿಮ ಪಾಕಿಸ್ಥಾನವು ತನ್ನ ರಾಷ್ಟ್ರದಲ್ಲಿಯೇ ಅಮಾನುಷ ನರಹತ್ಯೆಯ ಘೋರ ಪಾಪಕಾರ್ಯದಿಂದ ಐತಿಹಾಸಿಕ ವಿಶ್ವದಾಖಲೆಯನ್ನು ಸ್ಥಾಪಿಸಿದೆ. ಸಭ್ಯತೆಯಿಲ್ಲದ ಕಾಲದಲ್ಲೂ ಇಂಥ ಭೀಕರ ಕಗ್ಗೊಲೆಯ ಉಲ್ಲೇಖನಗಳು ಜಾಗತಿಕ ಚರಿತ್ರೆಯಲ್ಲಿ ಇಲ್ಲ. ಆ ಪಾಪವೇ ಇಂದು ಪಾಕಿಸ್ತಾನವನ್ನು ಭೂತ ಬೆನ್ನಟ್ಟಿದಂತೆ ಆಗಿದೆ. ಅದು ತನ್ನ ಅಸ್ತಿತ್ವವನ್ನೇ ನಾಶಮಾಡಿಕೊಳ್ಳುವ ಚರಮ ಹಂತಕ್ಕೇರಿ ನಿಂತಿದೆ. ಈ ಸ್ಥಿತಿಯಲ್ಲಿ ಭಾರತ ತನ್ನ ಮೇಲೆ ಬಿದ್ದ ಅನೇಕ ಒತ್ತಡಗಳನ್ನು ನಿವಾರಿಸಿ ಕೊಳ್ಳಲು ಭೂತ ದಯಾಪರ ನೀತಿಯನ್ನು ರಕ್ಷಿಸಿಕೊಳ್ಳಲು ಅನಿವಾರ್ಯವಾಗಿ ಪೂರ್ವ ಬಂಗಾಳದಲ್ಲಿ ಸೈನಿಕ ಕಾರ್ಯಾಚರಣೆಯನ್ನು, ಪಶ್ಚಿಮ ದಲ್ಲಿ ಸಾರ್ವಭೌಮತ್ವ ರಕ್ಷಣೆಗಾಗಿ ಯುದ್ಧವನ್ನು ಮಾಡಬೇಕಾಗಿ ಬಂದುದು ದುರ್ದೈವದ ಸಂಗತಿಯೆ! ಕಳೆದ 24-25 ವರ್ಷಗಳಿಂದ ಭಾರತದ ಮೇಲೆ ಕಿರಿಕಿರಿಯನ್ನುಂಟು ಮಾಡುತ್ತ, ವಿಧ್ವಂಸಕ ಕಾರ್ಯದಲ್ಲಿ ತೊಡಗಿರುವ ಪಾಕಿಸ್ತಾನಿಯರ ರಣತೀಟೆಯ ಉಪಶಮನಾರ್ಥವಾಗಿಯೋ ಎಂಬಂತೆ ಭಾರತದ ವೀರಯೋಧಪಡೆ ಅಪ್ರತಿಮ ಸಾಹಸವನ್ನು ತೋರಿ ಸಿತು. ತನ್ನ ಪ್ರಾಚೀನ ವೀರ ಪರಂಪರೆಗೆ ಮೆರಗನ್ನಿತ್ತಿತು. ನಮ್ಮ ವೀರ ಯೋಧರ ಒಂದೊಂದು ಶೌರ್ಯ ಸಾಹಸಗಳ ಕಥೆ ರೋಮಾಂಚಕಾರಿ. ಆದರೆ ದುರ್ದೈವದ ಸಂಗತಿಯೆಂದರೆ ಕೆಲವು ಶಕ್ತ ರಾಷ್ಟ್ರಗಳು ಸ್ವಪ್ರಯೋಜನಕ್ಕಾಗಿ ಪಾಕಿ ಸ್ಥಾನವನ್ನು ತಮ್ಮ ಹತೋಟಿಯಲ್ಲಿಟ್ಟು ಕೊಳ್ಳಲು ಅದರ ತಪ್ಪುಗಳನ್ನು ಮರೆಮಾಚುತ್ತಭಾರತದ ನ್ಯಾಯ ಸಮ್ಮತ ವ್ಯವಹಾರಗಳಿಗೆ ತಡೆಯೊಡ್ಡುತ್ತ ಬರುವುದನ್ನು ನೋಡಿದರೆ ಶಕ್ತಿವಂತರಾಷ್ಟ್ರಗಳಲ್ಲಿ ಕೆಲವು ಯಾವಕಾರ್ಯ ಮಾಡಲು ಹಿಂಜರಿಯುವುದಿಲ್ಲವೆಂಬಂತೆ ಜಗಜ್ಜಾಹೀರಾಗುತ್ತಿದೆ. ಅಂತೆಯೇ ನಮ್ಮ ಪ್ರಧಾನ ಮಂತ್ರಿ ಭಾರತ ರತ್ನ ಇಂದಿರಾ ಗಾಂಧಿಯವರು ತಾರೀಖು ೧೨-೧೨-೭೧ ರಂದು ದೆಹಲಿಯಲ್ಲಿ ಮಾಡಿದ ಅದ್ಭುತಧೈರ್ಯಸ್ಥೈರ್ಯದ ಭಾಷಣವು ಸಮಗ್ರ ಭಾರತದ ೫೫ ಕೋಟಿ ಜನರ ಮೊಳಗೆಂಬುದರಲ್ಲಿ ಸಂದೇಹವಿಲ್ಲವೆಂಬುದನ್ನು ಅಂಥ ತತ್ತ್ವಹೀನ ಹಿರಿಯ ರಾಷ್ಟ್ರಗಳು ಅರಿತುಕೊಳ್ಳಬೇಕು. ಭಾರತವಿಂದು 'ಸನ್ನದ್ಧ ಭಾರತ' ವೆನಿಸಿದೆ. ಅನೇಕ ಪರಕೀಯರ ಮೋಸದ ವರ್ತನೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ದಿಟ್ಟ ಮಾರ್ಗದಲ್ಲಿ ಹೆಜ್ಜೆಯಿಡಲು ಸನ್ನದ್ಧವಾಗಿದೆ. ಹಿಂದಿನಂತೆ ನಾವು ಅಜಾತ ಶತ್ರುಗಳೆಂಬ ತತ್ತ್ವವನ್ನು ಸ್ವಲ್ಪಮಟ್ಟಿಗೆ ಮಾರ್ಪಡಿಸಿಕೊಂಡಿದೆ. ಶತ್ರುಗಳಾರು ಮಿತ್ರರಾರು ಎನ್ನುವುದನ್ನು ತಿಳಿಯುವ ವಿವೇಕ ಮೂಡಿದೆ. ದಿ॥ ಭಾರತ ರತ್ನ ನೆಹರೂ ಅವರು ಮಹಾ ಆದರ್ಶವಾದಿಗಳೆನಿಸಿದ್ದರು. ಅವರ ಮಹಾ ಆದರ್ಶವಾದಕ್ಕೆ ಇದ್ದಕ್ಕಿದ್ದಂತೆ ಚೀನಾವೇಶದಿಂದ ಬೆನ್ನಿರಿತದ ಪ್ರಬಲ ಆಘಾತವಾದ ಮೇಲೆ ಭಾರತದ ಈ ಮನೋಭಾವ ಸ್ವಲ್ಪ ಮಟ್ಟಿಗೆ ಮಾರ್ಪಾಟುಗೊಂಡು ಕಣ್ದೆರೆದು ನಾಲ್ದೆಸೆಗಳನ್ನು ಎಚ್ಚರದಿಂದ ನೋಡುತ್ತಿದೆ.

ನ್ಯಾಯ ಸಮ್ಮತವಾದ ಪೂರ್ವ ಪಾಕಿಸ್ತಾನವೆನ್ನಿಸಿದ್ದ "ಬಾಂಗ್ಲಾ" ದೇಶದ ಏಳುವರೆ ಕೋಟಿ ಜನರ ಮೇಲೆ ಪಶ್ಚಿಮ ಪಾಕಿಸ್ತಾನದ ಮಿಲಿಟರಿ ದಬ್ಬಾಳಿಕೆಯ ಕಥೆ ಕರುಣಾಜನಕವಾದದ್ದು. ನೆರೆಯ ರಾಷ್ಟ್ರವೊಂದರಲ್ಲಿ ಇಂಥ ಮಹಾ ಪ್ರಮಾದದ ದಬ್ಬಾಳಿಕೆ ನಡೆಯುತ್ತಿರುವಾಗ ಕೋಟಿ ಜನ ಓಡಿಬಂದು ಭಾರತಕ್ಕೆ ಹೊರೆಯಾದಾಗ ಭಾರತವು ಸುಮ್ಮನೆ ಕೈಕಟ್ಟಿಕೊಂಡು ಕುಳಿತುಕೊಳ್ಳಲು ಶಕ್ಯವಿಲ್ಲದಾಯಿತು. ನಮಗೆ ಹೊರೆಯಾಗಿದ್ದ ಬಾಂಗ್ಲಾದೇಶೀಯರನ್ನು ತಮ್ಮ ದೇಶದಲ್ಲಿ ಗೌರವವಾಗಿ ಬಾಳುವಂತೆ ಮಾಡಲು ಭಾರತ ತನ್ನ ಶಕ್ತಿಪ್ರಯೋಗಿಸಲೇ ಬೇಕಾಯಿತು. ಅದಕ್ಕೆ ಸಮಯವನ್ನು ಕಾಯುತ್ತಿದ್ದಂತೆ ಒಮ್ಮೆಲೆ ಸಮಗ್ರತೆಗೆ ಧಕ್ಕೆ ತರುವಂಥ ಯುದ್ಧ ಘೋಷಣೆಯನ್ನು ಪಶ್ಚಿಮ ಪಾಕಿ

ಸ್ಥಾನ ಕೈಕೊಂಡು ಆಗ್ರಾ, ಅಮೃತಸರ,- ಮೊದಲಾದ ನಮ್ಮ ನಗರಗಳ ಮೇಲೆ ಬಾಂಬ್ ದಾಳಿಯನ್ನು 3-12-71 ರಂದು ಪ್ರಾರಂಭಿಸಿಯೇ ಬಿಟ್ಟಿತು. ಇನ್ನು ಸಾಮದಾನ ಭೇದಗಳು ಪ್ರಯೋಜನವಿಲ್ಲವೆಂದು
ಯನ್ನು ಮಿಂಚಿನವೇಗದಲ್ಲಿ ಪ್ರಾರಂಭಿಸಿ ಬಾಂಗ್ಲಾ ದೇಶಕ್ಕೆ ಮಾನ್ಯತೆ ನೀಡಿ ಕಳೆದ ೧೪ ದಿನಗಳಲ್ಲಿ ಪಾಕಿಸ್ತಾನದ ಶಕ್ತಿಯನ್ನಡುಗಿಸಿ ಸುಮಾರು ೧ ಲಕ್ಷ ಸಂಖ್ಯೆಯ ಪಾಕಿಸ್ತಾನಿ ಸುಸಜ್ಜಿತ ಪಡೆ ಶರಣಾಗತರಾಗುವಂತೆ ಮಾಡಿ ಅದ್ಭುತ ಸಾಧನೆಯನ್ನೇ ಮಾಡಿತು. ತಾರೀಖು 16-12-71ರ ಸಾಯಂಕಾಲ 4 ಘಂಟೆ 31 ನಿಮಿಷಕ್ಕೆ ಪಾಕಿಸ್ತಾನದ ಪ್ರಧಾನ ದಂಡನಾಯಕ ಶ್ರೀ ನಿಯಾಜಿರವರು ಶರಣಾಗತರಾಗಿ ಢಾಕಾದಲ್ಲಿ ನಡೆಯಬೇಕಾಗಿದ್ದ ಭೀಕರ ಹತ್ಯಾಕಾಂಡ ತಪ್ಪಿಸಿ ವಿವೇಕದ ಹಾದಿತುಳಿದುದರೊಡನೆ ಕದನವೂ ಪರಿಸಮಾಪ್ತಿಗೊಂಡಿತು. ಭಾರತವು ವಿಜಯದಿಂದ ಉನ್ಮತ್ತ ವಾಗಲಿಲ್ಲ. ಬೇಕೆಂದರೆ ಈ ಯುದ್ಧದಲ್ಲಿ ಪಾಕಿಸ್ಥಾನವನ್ನು ನಿರ್ನಾಮಗೊಳಿಸಬಹುದಿತ್ತು. ಭಾರತವು ತನ್ನ ಸ್ಪಷ್ಟನಿಲುವಾದ ಅನ್ಯರ ಒಂದಂಗುಲ ಪ್ರದೇಶವೂ ಬೇಡ ಎನ್ನುವ ಮಾತಿಗೆ ಏಕಪಕ್ಷೀಯವಾಗಿ ಕದನ ನಿಲುಗಡೆಗೆ ಕರೆಕೊಟ್ಟಿತು. ಇದನ್ನೇ ಕಾಯುತ್ತಿದ್ದ, ಅನ್ಯ ಮಾರ್ಗವಿಲ್ಲದ ಪಾಕಿಸ್ಥಾನವೂ ಈ ನಿಲುವನ್ನಂಗೀಕರಿಸಿ ತಾರೀಖು 17-12-71 ಶುಕ್ರವಾರ ರಾತ್ರಿ 8 ಘಂಟೆಗೆ ಕದನ ವಿರಾಮಕ್ಕೆ ಇತಿಶ್ರೀ ಹಾಡಿತು.

ಈ ಘರ್ಷಣೆಯಲ್ಲಿ 'ಭಾರತ ರತ್ನ' ಪ್ರಧಾನ ಮಂತ್ರಿ ಇಂದಿರಾ ಗಾಂಧಿಯವರು ತೋರಿಸಿದ ದಿಟ್ಟ ನಿಲುವನ್ನು ಪ್ರಪಂಚವೆ ಮುಕ್ತ ಕಂಠದಿಂದ ಶ್ಲಾಘಿಸಿತು. ಆದರೆ ಅಮೇರಿಕಾಕ್ಕೆ ಸಮಗ್ರ ವಿದ್ಯಮಾನವು ದೊಡ್ಡ ಅಪಜಯವನ್ನೇ ಉಂಟು ಮಾಡಿತು. ಅಮೇರಿಕಾದಂಥ ಅಗ್ರಮಾನ್ಯ ಪ್ರಬಲ ರಾಷ್ಟ್ರ ಅದರಲ್ಲೂ ಪ್ರಜಾಪ್ರಭುತ್ವ ನೀತಿಗೆ ಬೆಂಬಲ ಕೊಡುವ ರಾಷ್ಟ್ರ ಈ ಸಂದರ್ಭದಲ್ಲಿ ತಾಳಿದ ನಿಲುವು ನ್ಯಾಯಸಮ್ಮತವಲ್ಲವೆಂದು ಹೇಳದೆ ವಿಧಿಯಿಲ್ಲ. ತನ್ನ ನಿಲುವನ್ನು ಇನ್ನಾದರೂ ಅಮೇರಿಕಾ ಮಾರ್ಪಡಿಸಿಕೊಳ್ಳುವುದು ಸೂಕ್ತ.

ಪ್ರಧಾನಮಂತ್ರಿ ಶ್ರೀಮತಿ ಇಂದಿರಾಗಾಂಧಿಯವರು ಈ ಯುದ್ಧ ಸಮಯದಲ್ಲಿ ತಾಳಿದ ದಿಟ್ಟನಿಲುವಿನ ಪರಿಣಾಮವಾಗಿ ಭಾರತಕ್ಕೆ ಭಾರಿ ವಿಜಯ ಪ್ರಾಪ್ತವಾದುದನ್ನು ಗಮನಿಸಿ ಭಾರತದ ಅತ್ಯುಚ್ಚ ಮಟ್ಟದ "ಭಾರತರತ್ನ" ಪ್ರಶಸ್ತಿಯನ್ನು ರಾಷ್ಟ್ರಪತಿಯವರು ತಾರೀಖು ೧೮-೧೨-೭೧ ರಂದು ನಡೆದ ವಿಶೇಷ ಸಭೆಯ ಸನ್ನಿವೇಶದಲ್ಲಿ ಕೊಟ್ಟುದನ್ನು ಹೃತ್ಪೂರ್ವಕವಾಗಿ ಸ್ವಾಗತಿಸುತ್ತೇವೆ. ಅವರ ನೇತೃತ್ವದಲ್ಲಿ ರಾಷ್ಟ್ರವು ಅನೇಕ ವಿಜಯ ಪರಂಪರೆಗಳನ್ನು ಪಡೆಯಲೆಂದು ಹಾರೈಸುತ್ತೇವೆ. ಅವರ ತ್ಯಾಗ ನಿಷ್ಠೆಗಳಿಂದ ಕೈಕೊಂಡ ಕಾರ್ಯಗಳಿಗೆಲ್ಲ ಸಮಗ್ರ ರಾಷ್ಟ್ರವೇ ಬೆಂಬಲವಾಗಿ ನಿಂತಿದೆಯೆಂದು ಸಿದ್ಧಗಂಗಾ ಪತ್ರಿಕೆ ತನ್ನ ನಿಲುವನ್ನು ವ್ಯಕ್ತಪಡಿಸುತ್ತದೆ.

ರಾಷ್ಟ್ರ ರಕ್ಷಣೆಯ ಈ ಮಹತ್ತರ ಯುದ್ಧ ಸನ್ನಿವೇಶದಲ್ಲಿ ಮಾತೃಭೂಮಿಗೆ ರಕ್ತ ತರ್ಪಣವಿತ್ತ ಸಹಸ್ರಾರು ಯೋಧರಿಗಾಗಿ ಸಿದ್ಧಗಂಗಾ ಪತ್ರಿಕೆ ತನ್ನ ಶೋಕವನ್ನು ವ್ಯಕ್ತ ಪಡಿಸುತದೆ.

ದ್ವಾವಿಮೌ ಪುರುಷೌಲೋಕೇ ಸೂರ್ಯಮಂಡಲ ಭೇದಿನೌ ।
ಪರಿವ್ರಾಟ್ ಯೋಗಯುಕ್ತಸ್ಯ ರಣೇಚಾಭಿಮುಖೇಹತಃ ॥

— ಜೈ - ಹಿಂದ್ —



# ಪೂಜ್ಯ ಶ್ರೀ ಶ್ರೀಗಳವರ ಕಾರ್ಯಕ್ರಮಗಳ ವಿವರ

## ಸೆಪ್ಟೆಂಬರ್ ೧ ರಿಂದ ನವಂಬರ್ ೩೦ರ ವರೆಗೆ.

2—9—71 ತುಮಕೂರು ಶ್ರೀ ಇಂಜಿನಿಯರಿಂಗ್ ಕಾಲೇಜ್ ವಿದ್ಯಾರ್ಥಿ ಸಂಘದ ಆರಂಭೋತ್ಸವದ ಅಧ್ಯಕ್ಷತೆ.

3—9—71 ರಾಮನಗರದ ಗಣಪತಿ ಉತ್ಸವದಲ್ಲಿ ಭಾಗವಹಿಸಿ ಆಶೀರ್ವಚನ.

4—9—71 ತುಮಕೂರು ಶ್ರೀ ಸಿದ್ಧಗಂಗಾ ಸೈನ್ಸ್, ಆರ್ಟ್ಸ್ ಮತ್ತು ಕಾಮರ್ಸ್ ಕಾಲೇಜಿನಲ್ಲಿ ಉಪದೇಶ.

5—9—71 1) ಹಿರಿಯೂರು ಗಣಗತಿ ಉತ್ಸವದಲ್ಲಿ ಭಾಗವಹಿಸಿ ಉಪದೇಶ.<br>2) ತುಮಕೂರಿನಲ್ಲಿ ಪೂಜಾಕಾರ್ಯಕ್ರಮ.<br>3) ದೇವಲಾಪುರದ ಕಾರ್ಯಕ್ರಮದಲ್ಲಿ ಆಶೀರ್ವಚನ.

6—9—71 ರಾಮಲಿಂಗಾಪುರದ ಗಣಪತಿ ಉತ್ಸವದಲ್ಲಿ ಭಾಗವಹಿಸಿ ಉಪದೇಶ.

7—9—71 ಹೊಸಕೋಟೆ ಹತ್ತಿರ ಲಕ್ಕನಹಳ್ಳಿಯಲ್ಲಿ ಉಪದೇಶ ಭಾಷಣ.

8—9—71 ಬೆಂಗಳೂರಿನಲ್ಲಿ ಗಣೇಶ ಮಹೋತ್ಸವದಲ್ಲಿ ಆಶೀರ್ವಚನ.

9—9—71 ಚಳ್ಳಕೆರೆಯಲ್ಲಿ ನೆರವೇರಿದ ಜನಸಂಘದ ಸಮಾರೋಪ ಭಾಷಣದ ಅಧ್ಯಕ್ಷತೆ.

12—9—71 ಮಳಿವಹಳ್ಳಿಯಲ್ಲಿ ಪೂಜಾ ಕಾರ್ಯಕ್ರಮ.

24—9—71 ಕೆಂಚನಪುರದಲ್ಲಿ ಪೂಜಾಕಾರ್ಯಕ್ರಮ.

25—9—71 ತುಮಕೂರು ದಿ|| ಶ್ರೀ ಜಿ. ಎಂ. ಸಿದ್ಧರಾಮಣ್ಣನವರ ವಾರ್ಷಿಕ ಆರಾಧನೆಯಲ್ಲಿ ಪೂಜಾಕಾರ್ಯಕ್ರಮ.

26—9—71 ಬೆಳಿಗ್ಗೆ ಬೆಂಗಳೂರಿನಲ್ಲಿ ಪೂಜಾಕಾರ್ಯಕ್ರಮ. ಸಾಯಂಕಾಲ ಮಾಗಡಿ ಅದೃಷ್ಟಪರೀಕ್ಷಾ ಸಂಸ್ಥೆಯ ಆಶ್ರಯದಲ್ಲಿ ನಡೆದ ಧರ್ಮಸಂಬಂಧವಾದ ಉಪನ್ಯಾಸ ಮಾಲೆಯಲ್ಲಿ ಭಾಗವಹಿಸಿ ಉಪದೇಶ ಭಾಷಣ

29—9—71 ಬೆಂಗಳೂಸು ಮೆಂಟಲ್ ಆಸ್ಪತ್ರೆಯ ಬಳಿ ನಿರ್ಮಿಸಿದ ನೂತನ ದೇವಾಲಯದ ಆರಂಭೋತ್ಸವ ಶ್ರೀಗಳವರ ಹಸ್ತದಿಂದ.

1—10—71 ತುಮಕೂರು ಶ್ರೀ ಕೆ. ನಾರಾಯಣ ಶೆಟ್ಟರ ಮಿಲ್ಲಿನ ಪ್ರಾರಂಭೋತ್ಸವ ಶ್ರೀಗಳವರ ಹಸ್ತದಿಂದ.

2—10—71 ಬೆಂಗಳೂರು ಕುಮಾರ ಪಾರ್ಕ್‌ನಲ್ಲಿ ಮೈಸೂರು ರಾಜ್ಯದ ಗಾಂಧೀಸ್ಮಾರಕ ನಿಧಿ ಸಮಿತಿಯವರ ಏರ್ಪಡಿಸಿದ್ದ ಗಾಂಧಿ ಜಯಂತ್ಯುತ್ಸವದಲ್ಲಿ ಉಪದೇಶ ಭಾಷಣ.

3—10—71 ಬೆಂಗಳೂರು ರಾಜಾಜಿನಗರದಲ್ಲಿ ಪೂಜೆ.

21—10—71 ಬೆಂಗಳೂರು ಪೂಜಾ ಕಾರ್ಯಕ್ರಮ.

22—10—71 ಮೈದಾಳದಲ್ಲಿ ಪೂಜೆ ಮತ್ತು ದೇವಸ್ಥಾನದ ಪ್ರಾರಂಭೋತ್ಸವ.

23—10—71 ಬೆಂಗಳೂರು ಚಾಮರಾಜ ಪೇಟೆಯಲ್ಲಿ ನೂತನ ಗೃಹ ಪ್ರವೇಶಮಹೋತ್ಸವ ಶ್ರೀಗಳವರ ಹಸ್ತ ದಿಂದ; ಬೆಂಗಳೂರಿನಲ್ಲಿ ಪೂಜಾ ಕಾರ್ಯಕ್ರಮ.<br>ಶೀನಪ್ಪನಹಳ್ಳಿಯಲ್ಲಿ ಪೂಜಾ ಕಾರ್ಯಕ್ರಮ.

24—10—71 ಶಿರಾದಲ್ಲಿ ನಟರಾಜ ಅಂಡ್ ಕೋ, ಅವರು ಏರ್ಪಡಿಸಿದ್ದ ಅದೃಷ್ಟ ಪರೀಕ್ಷೆಯ ಡ್ರಾ ಸಮಾರಂಭ ದಲ್ಲಿ ಭಾಗವಹಿಸಿದರು.

31—10—71 ರೇಚಂಬಳ್ಳಿ ದಯಮಾಡಿಸಿ ಆಶೀರ್ವಚನ.

1—11—71 ವಿಜಯಪುರದ ಕನ್ನಡ ರಾಜ್ಯೋತ್ಸವ ಸಮಾರಂಭದಲ್ಲಿ ಉಪದೇಶ.<br>ಬೆಂಗಳೂರು ಹೆಚ್. ಎಂ. ಟಿ. ಕಾರ್ಖಾನೆಯ ಹನುಮಂತ ದೇವಸ್ಥಾನದ ಆವರಣದಲ್ಲಿ ಶಿವಲಿಂಗ ಪ್ರತಿಸ್ಥಾಪನೆ ಸಮಯದಲ್ಲಿ ಉಪದೇಶ.

2—11—71 ತುಮಕೂರಿನಲ್ಲಿ ಪೂಜಾ ಕಾರ್ಯಕ್ರಮ. ಇಂಜಿನಿಯರಿಂಗ್ ಕಾಲೇಜು ಕಾರ್ಯಕಾರಿ ಸಮಿತಿ ಸಭೆಯ ಅಧ್ಯಕ್ಷತೆ.

3—11—71 1) ಅಖಿಲ ಭಾರತ ವೀರಶೈವ ಮಹಾ ಸಭೆಯ ಕಾರ್ಯಕಾರಿ ಸಮಿತಿಯ ಸಭೆಯ ಅಧ್ಯಕ್ಷತೆ.
2) ಮೈಸೂರು ರಾಜ್ಯದ ನೀತಿಬೋಧಕ ಪಠ್ಯ ಪುಸ್ತಕ ನಿರ್ಮಾಣ ಸಮಿತಿ ಸಭೆ.
3) ಸಂಜೆ ಗಣಪತಿ ಉತ್ಸವದಲ್ಲಿ ಭಾಗವಹಿಸಿದುದು.

4—11—71 ತುಮಕೂರು ಮತ್ತು ಬಾಣವಾಡಿಯಲ್ಲಿ ಪೂಜಾಕಾರ್ಯಕ್ರಮಗಳು.

6—11—71 ನಿಟ್ಟೂರು ದೊಡ್ಡಸಾಗ್ಗೆರೆಗಳಲ್ಲಿ ಪೂಜಾ ಕಾರ್ಯಕ್ರಮ.

7—11—71 1) ತಿಮ್ಮನಾಯ್ಕನಹಳ್ಳಿಯಲ್ಲಿ ನಡೆದ ಕ್ಷೇತ್ರೋತ್ಸವದ ಅಧ್ಯಕ್ಷತೆ, ಮತ್ತು ಪೂಜಾ ಕಾರ್ಯಕ್ರಮ.
2) ಇದೇ ಗ್ರಾಮದಲ್ಲಿ ನೂತನವಾಗಿ ನಿರ್ಮಿಸಿದ ಹಾಲಿನ ಡೈರಿಯ ಉದ್ಘಾಟನಾ ಸಮಾರಂಭ ಅಧ್ಯಕ್ಷತೆ.
3) ಕುಣಿಗಲ್ ತಾಲ್ಲೂಕು ಅಂಕಸಹಳ್ಳಿ ಗವಿಮಠದಲ್ಲಿ ಪ್ರತಿಷ್ಠಾಪನಾ ಮಹೋತ್ಸವವನು ನೆರವೇರಿಸಿದರು.

8—11—71 ಕುಣಿಗಲ್ ತಾಲ್ಲೂಕು ಸೊಣ್ಣೆನಾಯಕನಹಳ್ಳಿ ಬಳಿ ನೂತನವಾಗಿ ರಾಜ್ಯ ಸರ್ಕಾರದವರು ನಿರ್ಮಿಸಿದ ಕೆರೆಯ ಆರಂಭೋತ್ಸವವನ್ನು ನೆರವೇರಿಸಿದರು.

8—11—71 ಮೈಸೂರು ರಾಜ್ಯದ (ಆಗಮಾ ಬೋರ್ಡ್ ಮೀಟಿಂಗ್) ಆಗಮಾ ಶಿಕ್ಷಣ ಸಮಿತಿಯ ಸಭೆಯಲ್ಲಿ ಭಾಗವಹಿಸಿದ್ದರು. ಸ್ಥಳ ಬೆಂಗಳೂರು.

10—11—71 ನೆಲಮಂಗಲ ತಾಲ್ಲೂಕು ಉಣ್ಣೆಗೆರೆ ಗ್ರಾಮಕ್ಕೆ ಭೇಟಿಯಿತ್ತು ಅಲ್ಲಿನ ದೇವಸ್ಥಾನದ ನಿರ್ಮಾಣದ ಬಗ್ಗೆ ಪರಿಶೀಲಿಸಿ ಸೂಕ್ತ ಸಲಹೆ.

15—11—71 ಮಧುಗಿರಿ ತಾಲ್ಲೂಕು ಬೆಳರುಡು ಗ್ರಾಮಕ್ಕೆ ದಯಮಾಡಿಸಿ ಆಶೀರ್ವಚನ.

16—11—71 ತುಮಕೂರು ಸರಕಾರಿ ಕಾಲೇಜು ಮತ್ತು ಶ್ರೀ ಸಿದ್ಧಗಂಗಾ ವಿಜ್ಞಾನ ಕಾಲೇಜಿನವರು ಏರ್ಪಡಿಸಿದ್ದ ಪುಸ್ತಕ ಭಂಡಾರ ಪ್ರದರ್ಶನದ ಆರಂಭೋತ್ಸವದಲ್ಲಿ ಆಶೀರ್ವಚನ.

19—11—71 ಪಾಂಡೋಮಟ್ಟಿ ವಿರಕ್ತ ಮಠದಲ್ಲಿ ಆಚರಿಸಿದ ಆರಂಭೋತ್ಸವದಲ್ಲಿ ಭಾಗವಹಿಸಿ ಆಶೀರ್ವಚನ.

21—11—71 ಹಿಂದೂಪುರದಲ್ಲಿ ಪೂಜಾ ಕಾರ್ಯಕ್ರಮ.
ಸಾಯಂಕಾಲ ಹಿಂದೂಪುರದ ರೋಟರಿ ಕ್ಲಬ್‌ನವರು ಏರ್ಪಡಿಸಿದ್ದ ಸಮಾರಂಭದಲ್ಲಿ ಭಾಷಣ

24—11—71 ಬೆಂಗಳೂರಿನಲ್ಲಿ ನಡೆದ ರಾಜ್ಯದ ಸಂಸ್ಕೃತ ಶಿಕ್ಷಣ ಸಮಿತಿಯ ಸಭೆಯಲ್ಲಿ ಭಾಗವಹಿಸಿದ್ದರು.

25—11—71 ಬ್ಯಾಡಗಿಯಲ್ಲಿ ನೆರವೇರಿದ ಸಹಕಾರಿ ಸಂಸ್ಥೆಯ ಸುವರ್ಣ ಮಹೋತ್ಸವವನ್ನು ನೆರವೇರಿಸಿದರು.

27—11—71 ನೆಲಮಂಗಲದಲ್ಲಿ ಪೂಜಾಕಾರ್ಯಕ್ರಮ.

28—11—71 ಬೆಳಿಗ್ಗೆ 9 ಘಂಟೆಗೆ ತುಮಕೂರಿನಲ್ಲಿ ನಡೆದ N. C. C. ದಿನಾಚರಣೆಯಲ್ಲಿ ಭಾಗವಹಿಸಿದ್ದರು. ಶ್ರೀ ಸಿದ್ಧಗಂಗಾ ಶಿಕ್ಷಣ ಸಮಿತಿಯ ಸರ್ವಸದಸ್ಯರ ಸಭೆಯಲ್ಲಿ ಭಾಗವಹಿಸಿದ್ದರು.



# ಎರಡು ಜಗಜ್ಜ್ಯೋತಿಗಳು



## ಬುದ್ಧ ಮತ್ತು ಬಸವ

ಮೂಲ :
ಶ್ರೀ ಶ್ರೀ
ಕುಮಾರ ಸ್ವಾಮೀಜಿ,
ನವಕಲ್ಯಾಣಮಠ, ಧಾರವಾಡ.

ಕನ್ನಡಕ್ಕೆ :
ಶ್ರೀ
ಟಿ. ಆರ್. ಮಹದೇವಯ್ಯ,
ಬೆಂಗಳೂರು.



[ ಸಂಪುಟ 7, ಸಂ. 1 ರಿಂದ ಮುಂದುವರಿದುದು ]

ಶಾಂತಿಯ ಕಲ್ಪನೆಯು ಕೇವಲ ಯುದ್ಧದಿಂದ ಬೇಸತ್ತ ವಿಶ್ವದ ಕೂಗು ಮಾತ್ರವಲ್ಲ. ಅದು ಅತ್ಯಂತ ಪ್ರಾಚೀನವಾದ ಮಾನವತೆಯ ನಿಡುಸುಯ್ಲು. ಸರ್ವ ವ್ಯಾಪಿಯೂ, ಸಾರ್ವಕಾಲಿಕವೂ ಆದ ಶಾಂತಿಗಾಗಿ ಪ್ರಾರ್ಥನೆಯು ಎಲ್ಲ ಮಂಗಳಕರ ಸಂದರ್ಭಗಳಲ್ಲಿಯೂ ಮಾನವಹೃದಯದಿಂದ ನಿರಂತರವಾಗಿ ಹೊಮ್ಮುತ್ತದೆ. ಶಾಂತಿ ಮತ್ತು ಪ್ರೀತಿಯ ಅಡಿಪಾಯದ ಮೇಲೆ ಸಾಮೂಹಿಕ ಜೀವನವನ್ನು ನಿರ್ಮಿಸಲು ಪ್ರಯತ್ನಗಳು ನಡೆದಿವೆ ಈಗಲೂ ನಡೆಯುತ್ತಿವೆ. ಇಪ್ಪತ್ತನೆಯ ಶತಮಾನದಲ್ಲಿ ಮೊದಲು ರಾಷ್ಟ್ರಸಂಘ (League of Nation) ಮೂಲಕವೂ, ನಂತರ ವಿಶ್ವಸಂಸ್ಥೆಯ U. N. O.) ಮೂಲಕವೂ ಶಾಂತಿಯನ್ನು ಸ್ಥಾಪಿಸಲು ಪ್ರಯತ್ನಗಳು ನಡೆದವು. ಎರಡನೆಯ ವಿಶ್ವಸಮರವು ಮುಗಿಯಿತು. ಆದರೂ ಶಾಂತಿಯು ನಮ್ಮ ದೃಷ್ಟಿಪಥದೊಳಗೆ ಕಂಡಿಲ್ಲ. ಎರಡನೆಯ ವಿಶ್ವಸಮರದಿಂದ ಬಹು ದೊಡ್ಡ ಹಾವಳಿ ಮತ್ತು ನಾಶಗಳುಂಟಾಗಿ, ಅಸಂಖ್ಯಾತ ಕೋಟಲೆಗಳು ಹೆಚ್ಚಿ ಜೀವನದ ಮೇಲೆ ಭಾರಿ ಹೊಡೆತವಾಗಿ, ಬೊಕ್ಕಸ ಹಾಗೂ ಮಾನವ ಸಂಪನ್ಮೂಲಗಳ ಅಗಾಧ ಖರ್ಚು ಹೆಚ್ಚಿತು. ಆದರೆ ದುರದೃಷ್ಟದಿಂದ ಈ ನಾಶ, ಸಂಕಷ್ಟಗಳು ಗೆದ್ದ ರಾಷ್ಟ್ರಗಳ ಯುದ್ಧ-ಪೂರ್ವ ದೃಷ್ಟಿಯಲ್ಲಿ ಗಣನೀಯ ಬದಲಾವಣೆಯನ್ನೇನೂ ಉಂಟುಮಾಡಲಿಲ್ಲ. ರಾಷ್ಟ್ರಗಳ ಸಂಬಂಧವನ್ನು ವರ್ಣಿಸುವಾಗಲೆಲ್ಲಾ ಸಾಮ್ರಾ

ಜ್ಯವಾದಿಯಾದ ಮನೋಭಾವ, ಯುದ್ಧಸಾಧನಗಳನ್ನು ಹೆಚ್ಚಿಸಿಕೊಳ್ಳಬೇಕೆಂಬ ಹುಚ್ಚು, ಆಕ್ರಮಣಶೀಲ ರಾಷ್ಟ್ರೀಯತೆ, ಶಕ್ತಿ ಮತ್ತು ಅಧಿಕಾರಲಾಲಸೆ— ಇವು ಮುಂದುವರಿಯುತ್ತಿವೆ.

ಈಗ ಏಳುವ ಪ್ರಶ್ನೆ ಮಾನವ ಸಮಾಜದಲ್ಲಿ ಯುದ್ಧ ಅನಿವಾರ್ಯವೇ? ಎಂಬುದು. ಇಲ್ಲ. ಮಾನವ ಸಮಾಜದಲ್ಲಿ ಯುದ್ಧ ಅನಿವಾರ್ಯವೇನಲ್ಲ. ಅದು ನಿವಾರಿಸಲಾಗದ್ದೇನೂ ಅಲ್ಲ. ಅದು ಮಾನವ ಸ್ವಭಾವದಲ್ಲಿ ಬೇರು ಬಿಟ್ಟಿಲ್ಲ. ಅದು ಬೇರು ಬಿಟ್ಟಿರುವುದು ಅಜ್ಞಾನದಲ್ಲಿ, ಸಂಕುಚಿತ ದೃಷ್ಟಿಯಲ್ಲಿ, ಸ್ವಾರ್ಥದಲ್ಲಿ, ಜನಾಂಗದ ಹಳೆಯ ಪದ್ಧತಿಗಳಲ್ಲಿ ಹಾಗೂ ಜೀವನವನ್ನು ನೋಡುವ ದೃಷ್ಟಿದೋಷದಲ್ಲಿ. ಯುದ್ಧವು ಒಂದು ಮಾನಸಿಕ ರೋಗವಾಗಿದ್ದು ತನ್ನದೇ ಆದ ಕಾರಣ ಮತ್ತು ಪರಿಹಾರಗಳನ್ನು ಹೊಂದಿದೆ. ಯುದ್ಧ ಕೆಲವು ಕಾರಣ ಹಾಗೂ ಕೆಲವು ಪರಿಸ್ಥಿತಿಗಳಿಂದ ಉಂಟಾಗುವ ಒಂದು ಸಾಮಾಜಿಕ ಘಟನೆ ಮತ್ತು ಆ ಕಾರಣಗಳನ್ನು ತಡೆಗಟ್ಟುವ ಹಾಗೂ ಪರಿಸ್ಥಿತಿಯನ್ನು ನಿವಾರಿಸುವುದರಿಂದ ಅದನ್ನು ಸಹ ನಾವು ತಡೆಗಟ್ಟಬಹುದು ಹಾಗೂ ನಿವಾರಿಸಬಹುದು. ಬಹು ಜನ ಪ್ರಾಜ್ಞರು ಯುದ್ಧದ ಕಾರಣ ಮತ್ತು ನಿವಾರಣೆಗಳ ಬಗ್ಗೆ ತಮ್ಮ ವಾದವನ್ನು ಮುಂದಿಟ್ಟಿದ್ದಾರೆ. ಆಡಂ ಸ್ಮಿತ್‌ನಿಂದ ಹಿಡಿದು ತ್ಸ್ಸಂಗ್ ಹಾಗೂ ಮಾರ್ಷಲ್‌ವರೆಗಿನ ಎಲ್ಲ ಶ್ರೇಷ್ಠ ಅರ್ಥಶಾಸ್ತ್ರಜ್ಞರೂ ಸ್ವತಂತ್ರ ವ್ಯಾಪಾರ ನೀತಿಯ ಪರವಾಗಿ ಒತ್ತಾಯ ಮಾಡಿದ್ದಾರೆ. ಏಕೆಂದರೆ ಅವರು ವಾಣಿಜ್ಯ ವಿಸ್ತರಣವು ಯುದ್ಧವನ್ನು ಹೋಗಲಾಡಿಸುತ್ತದೆ ಎಂದು ದೃಢವಾಗಿ ನಂಬಿದ್ದರು. ಅವರ ದೃಷ್ಟಿಯಲ್ಲಿ ವಾಣಿಜ್ಯ ಪ್ರವೃತ್ತಿ (commercialism)ಯು ಯುದ್ಧ ಮನಸ್ಕತೆಯ (militarism) ಸ್ವಾಭಾವಿಕ ಶತ್ರು. ಅದನ್ನು ಭೂಮಿಯ ಮೇಲಿಂದ ಓಡಿಸಿಬಿಡಬಹುದೆಂದು ಅವರ ಅಭಿಪ್ರಾಯ. ಬಂಗಾರದ ಮೇಲಣ ಅತಿ ಆಸೆ, ಸುಖ ಸಾಧನ ಪ್ರವೃತ್ತಿ, ಉತ್ಪದನಾ ಹೆಚ್ಚಳದ ಆವಶ್ಯಕತೆ ಮತ್ತು ಜಟಿಲವಾದ ಹಣ ವಿನಿಮಯಗಳು, ಅಧಿಕಾರ ಮತ್ತು ರಾಜ್ಯದಾಹ ಹಾಗೂ ಪ್ರತಿಷ್ಠೆ ಮತ್ತು ಯುದ್ಧದ ಮೇಲಣ ಅತಿ ಆಸೆ–ಇವೆಲ್ಲವನ್ನೂ ತಲೆಯೆತ್ತದಂತೆ ಮಾಡಬಹುದು. ಬಂಗಾರದ ಮೇಲಿನ ಅಥವಾ ಸರಕಿನ ಮೇಲಿನ ದಾಹವು ಭೂಮಿದಾಹವನ್ನು ಓಡಿಸಬಹುದು ಹಾಗೂ ಹೋರಾಟದ ಸಹಜ ಪ್ರವೃತ್ತಿಗೆ ನೋವಿಲ್ಲದ ವಿನೋದನೆಯನ್ನು ಕೊಡಬಹುದು. ವಾಸ್ತವವಾಗಿ ಇದು ಕೃತ್ಸ್ಪೂರ್ವಕ ಬಯಕೆ. ಆದರೆ ಮಾನವನ ಬಯಕೆಯೇ ಪ್ರಕೃತಿಯ ಸಂಕಲ್ಪವಾಗಿರುವುದಿಲ್ಲ. ನಿಜವಾಗಿ ಆದದ್ದೇನು? ವಾಸ್ತವವಾಗಿ ಈ ವಾಣಿಜ್ಯ ಪ್ರವೃತ್ತಿಯ ಆಳ್ವಿಕೆಯೇ ಉತ್ಪನ್ನ ಹಾಗೂ ವಿನಿಮಯದ ಹೆಚ್ಚಳವೇ ಸರಕುಗಳ ಮತ್ತು ಮಾರುಕಟ್ಟೆಯ ಬಗೆಗಿನ ಅಪೇಕ್ಷೆಯೇ ಮಾನವ ಜನಾಂಗವನ್ನು ನೋಯಿಸಿದ ಯುದ್ಧಗಳಲ್ಲಿ ಅರ್ಧದಷ್ಟಕ್ಕೆ ಕಾರಣವಾಗಿವೆ. ಈಗ ಯುದ್ಧ ಮನೋವೃತ್ತಿ ಮತ್ತು ವಾಣಿಜ್ಯ ಪ್ರವೃತ್ತಿಗಳೆರಡೂ ಮೇಳವಾಗಿ ರಾಷ್ಟ್ರೀಯ ಜೀವನ ಹಾಗೂ ದೇಶಾಭಿಮಾನದ ಉತ್ಕಾಂಕ್ಷೆಯಲ್ಲಿ ಏಕೀಭವಿಸಿ ಉಭಯತ್ವವನ್ನು ಪಡೆದು ತಮ್ಮ ಶಕ್ತಿಯಿಂದ ಆಧುನಿಕ ಕಾಲದ ಅತ್ಯಂತ ಅವಿವೇಕವಾದ ಯುದ್ಧಗಳಿಗೆ ಕಾರಣವಾಗಿದೆ.

ರಾಜಕೀಯ ಉದಾರವಾದಿಗಳೋ ಈ ರೀತಿಯಾಗಿ ಪ್ರತಿಪಾದಿಸುತ್ತಾರೆ:— ಪ್ರಜಾಪ್ರಭುತ್ವದ ಬೆಳವಣಿಗೆಯೆಂದರೆ ಶಾಂತಿವಾದದ ಬೆಳವಣಿಗೆ. ಆ ಮೂಲಕ ಯುದ್ಧದ ಕೊನೆ. ಅರಸರು ಹಾಗೂ ಶ್ರೀಮಂತ ವರ್ಗದವರಿಂದಲೇ ಸ್ವಭಾವತಃ ಯುದ್ಧಗಳು ಘಟಿಸುತ್ತವೆ. ದುರಾಸೆಯ ದೊರೆಗಳು ಮತ್ತು ಯುದ್ಧೋತ್ಸಾಹಿಗಳಾದ ಮಾನ್ಯರು, ವ್ಯವಹಾರ ಪಟುಗಳು, ಭೂಮಿಯ ದಾಹ ಮತ್ತು ಯುದ್ಧದಾಹದಿಂದ ಪ್ರಚೋದಿತರಾಗಿ ಮನುಷ್ಯರ ಜೀವ ಮತ್ತು ರಾಷ್ಟ್ರಗಳ ಭವಿಷ್ಯದೊಂದಿಗೆ ಆಟವಾಡುತ್ತಾರೆ. ಕಟುಕರಂಗಡಿಗೆ ಕುರಿಗಳನ್ನು ಅಟ್ಟುವಂತೆ ನಿರ್ಭಾಗ್ಯ ಜನರನ್ನು ಯುದ್ಧಭೂಮಿಗೆ ಅಟ್ಟುವುದರಲ್ಲಿ ತೊಡಗುತ್ತಾರೆ. ಯುದ್ಧಕ್ಕೆ ಕಾರಣವಾದ ದೋಷಯುಕ್ತವಾದ ಕಾರಣಗಳು ಇವೇ. ಸರ್ಕಾರ ಮತ್ತು ರಾಯಭಾರ ಕುಶಲಿಗಳು ಈಗಲೂ ಹಲವು ಸಲ ಯುದ್ಧಕ್ಕೆ ಕಾರಣವಾಗಿದ್ದರೆ ಆಧುನಿಕ ಪ್ರಜಾ ಪ್ರಭುತ್ವವೇ ಅವರಿಗೆ ಸ್ಫೂರ್ತಿದಾಯಕ ಹಾಗೂ ಕೋಲಾಹಲದ ಸಹಾಪರಾಧಿ

ಯಲ್ಲದೆ ಬೇರೆ ಯಾವುದೂ ಸಾಧ್ಯವಾಗದು. ಉದ್ರಿಕ್ತರಾಗಿ ಕೂಗುವ ಜನರು ಉನ್ಮುಖವಾಗಲು ಬಲವಂತಪಡಿಸುವಾಗ ಸರ್ಕಾರಗಳ ಹಾಗೂ ರಾಜ್ಯಭಾರ ಕುಶಲಿಗಳ ಆಧುನಿಕ ದೃಷ್ಟಿ ಬಾಯಿ ತೆರೆದ ಕಂದರದಂತಹ ಯುದ್ಧವನ್ನು ಕಂಡು ದಿಗಿಲು ಪಟ್ಟಂತೆ ತೋರುವುದನ್ನು ನಾವು ಮೇಲಿಂದ ಮೇಲೆ ಕಾಣಬಹುದು. ಅಯ್ಯೋ, ನಾವು ಅರಗಿಸಿಕೊಳ್ಳಲಾಗದ ಅತಿ ಪ್ರಜಾಪ್ರಭುತ್ವದಿಂದ ತೊಂದರೆಗೊಳಗಾಗಿದ್ದೇವೆ ಗೆರಾಲ್ಡ್ ಹೆರ್ಡ್ ಅಭಿಪ್ರಾಯಪಡುವಂತೆ, "ಹಳೆಯ ವ್ಯಕ್ತಿಗತವಾದ ಪ್ರಜಾಪ್ರಭುತ್ವಕ್ಕೆ ಯಾವ ಭರವಸೆಯೂ ಇಲ್ಲ. ಈಗಿರುವ ಅದರ ಸ್ವಭಾವವನ್ನು ನೋಡಿದರೆ ಪ್ರಜಾಪ್ರಭುತ್ವಕ್ಕೆ ಭವಿಸ್ಯವೇ ಇಲ್ಲ. ಅದು ಒಂದು ಜೀವಂತ ಶರೀರಿಯಲ್ಲ. ಆದರೆ ಸಂಪೂರ್ಣವಾಗಿ ವಯ್ಯಕ್ತಿಕವಾದ ಜನಗಳ ಸಂಕೀರ್ಣ ಸಂಚಯ." ಎಲ್ಲಿಯ ತನಕ ಸಾವಯವ ಪ್ರಜಾಪ್ರಭುತ್ವವು ಎಲ್ಲ ಮಾನವರೂ ಸಮಾನರೆಂದು ಹೇಳದೆ ಸಮಾನ ಬೆಲೆಯವರೆಂದು ಎತ್ತಿಹಿಡಿಯುತ್ತದೆಯೋ ಅಲ್ಲಿಯ ತನಕ ಅದು ವಿಶ್ವರಾಜಕೀಯದ ಪಂಥವಾಗಲಾರದು ಹಾಗೂ ಯುದ್ಧವನ್ನು ನಿವಾರಿಸುವ ಎಲ್ಲ ಪ್ರಯತ್ನಗಳೂ ನಿರರ್ಥಕವಾಗುತ್ತವೆ.

ದಾರ್ಶನಿಕರು ವ್ಯಕ್ತಿಯ ಅನಂತ ಮೌಲ್ಯವನ್ನು ಸದಾ ಘೋಷಿಸುತ್ತಾ ಬಂದಿದ್ದಾರೆ. ಮನುಷ್ಯನು ಯಂತ್ರದ ಒಂದು ಕೀಲು ಮಾತ್ರವಲ್ಲ, ಅವನು ಸಜೀವ ಶಕ್ತಿ. ಅವನು ಗುರಿ ಮುಟ್ಟುವ ಸಾಧನ ಮಾತ್ರವಲ್ಲ, ಅವನೇ ಗುರಿ. ಪ್ರತಿಯೊಂದು ಧರ್ಮವೂ ಮನುಷ್ಯನಲ್ಲಿರುವ ಆಧ್ಯಾತ್ಮಿಕ ಅಂಶವನ್ನು ಕುರಿತು ಒತ್ತಿ ಹೇಳಿವೆ. ಅವನ ಆಧ್ಯಾತ್ಮಿಕ ಅನುಭವವೇ ಗಣನಾರ್ಹವಾದದ್ದು. ಅನುಭಾವವು ಬೌದ್ಧಿಕ, ಭಾವನಾತ್ಮಕ ಮತ್ತು ನೈತಿಕ ಚಟ್ಟವಟಿಕೆಗಳನ್ನು ಒಳಗೊಂಡಿದ್ದರೂ, ಅವಕ್ಕೆ ಅತೀತವಾಗಿದೆ. ಇದು ಜೀವಿಯ ಮುಲಕವಾದ ಜ್ಞಾನವಾದ್ದರಿಂದ ವಾಸ್ತವಿಕ ಮತ್ತು ವಯ್ಯಕ್ತಿಕವಾಗಿರುತ್ತದೆ. ಆದರೆ ಭಾವನಾತ್ಮಕ ಜ್ಞಾನದಂತೆ ಅಮೂರ್ತ ಮತ್ತು ಸಾಮಾನ್ಯನಾಗಿರುವುದಿಲ್ಲ. ರಾಜ್ಯನೀತಿಯ ಕಲೆಯು ಆಧ್ಯಾತ್ಮಿಕ ಜೀವನ ಮತ್ತು ಅನುಭವಗಳ ಸಂಪರ್ಕಗಳನ್ನು ಪಡೆಯದಿದ್ದರೆ, ಎಂದಿನಂತೆ ಬರಡು ಮತ್ತು ನಿಷ್ಫಲವೆನಿಸುತ್ತದೆ. ನಾವು ಇತಿಹಾಸದ ಗತಿಯನ್ನು ಗಮನಿಸಿದರೆ ಗ್ರೀಕರ ಕಾಲಕ್ಕೂ ಮತ್ತು ನಮ್ಮದಕ್ಕೂ ವಾಸ್ತವಿಕ ಪ್ರಗತಿಯೇನೂ ಆಗಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಗ್ರೀಸನ್ನು ಹಾಳುಗೆಡವಿದ ಪೆಲೊಪೊನ್ನಿಸಿಯದ ಯುದ್ಧಕ್ಕೂ 1914ರ ಯುದ್ಧಕ್ಕೂ ತುಂಬ ಹತ್ತಿರದ ಸಂಬಂಧವಿದೆಯೆಂಬ ಮಾತು ಅತಿಶಯೋಕ್ತಿಯಲ್ಲ. ಬರೀ ಅಳತೆ ಅಸಂಬದ್ಧವಾಗುತ್ತದೆ, ವಸ್ತುಸ್ಥಿತಿ ಮಾತ್ರ ಅವಶ್ಯವಾಗಿ ಒಂದೇ ಆಗಿರುತ್ತದೆ. ವಸ್ತುಸ್ಥಿತಿ ಒಂದೇ ಇರುವುದರಿಂದಲೇ ಋಷಿಗಳು ಒಂದೇ ರೀತಿಯ ಸಂದೇಶದೊಂದಿಗೆ ನಿರಂತರವಾಗಿ ಹುಟ್ಟುತ್ತಾ ಬಂದಿದ್ದಾರೆ. ಅವರ ಅಹಿಂಸೆಯ ಸಂದೇಶವನ್ನು ಒಪ್ಪುವ ತನಕ ನಾವು ಮುಂದುವರಿಯಲಾರೆವು, ಕೇವಲ ಡೋಲಾಯಮಾನ ಸ್ಥಿತಿಯಲ್ಲಿರುತ್ತೇವೆ. ಏಕೆಂದರೆ ನಮ್ಮ ಭಾವೋದ್ರೇಕ, ನಮ್ಮ ಮನೋಭಾವ, ನಮ್ಮ ಬುದ್ಧಿ ಶಕ್ತಿಗಳು ನಿರಂತರವಾದ ವ್ಯತ್ಯಾಸ ಹೊಂದುತ್ತಲೇ ಇರುತ್ತವೆ. ಆಧ್ಯಾತ್ಮಿಕ ಮನೋಭಾವ, ನಮ್ಮ ಬುದ್ಧಿ ಶಕ್ತಿಗಳು ನಿರಂತರವಾದ ವ್ಯತ್ಯಾಸ ಹೊಂದುತ್ತಲೇ ಇರುತ್ತವೆ. ಆಧ್ಯಾತ್ಮಿಕ ಜೀವನ ಹಾಗೂ ರಾಜಕೀಯ ಜೀವನಗಳನ್ನು ಪರಸ್ಪರ ಹೊಂದಿರುವವರೆಗೆ ಎರಡಕ್ಕೂ ಪಾರ್ಶ್ವವಾಯು ಹೊಡೆದಂತಾಗುತ್ತದೆ. ಯುಗಯುಗಾಂತರಗಳಿಂದ ಮನುಷ್ಯನನ್ನು ಕೆಣಕಿದ ರಾಕ್ಷಸ ಸಮಸ್ಯೆ ಇದೇ. ಆ ಸಮಸ್ಯೆಯನ್ನು ಬಿಡಿಸಲಾಗದ ನಾವು ನಾಗರೀಕತೆಯನ್ನೇ ಬಲಿ ಕೊಡುತ್ತಿದ್ದೇವೆ.

ಬುದ್ಧ ಮತ್ತು ಬಸವ - ಇಬ್ಬರೂ ಅಹಿಂಸೆಯ ಬೋಧೆಯನ್ನು ನೀಡಿದರೂ ನಿಜವಾಗಿ ಅದನ್ನು ವೈಶಿಷ್ಟ್ಯಪೂರ್ಣವಾಗಿಸಿದವರು ಜೈನರು. ಜೈನ ಧರ್ಮಬೋಧಕರು ಹಿಂಸೆಯನ್ನು ಅಥವಾ ಇತರರಿಗೆ ಮಾಡುವ ಬಾಧೆಯನ್ನು ಪ್ರಾಸಂಗಿಕ, ಔದ್ಯೋಗಿಕ, ಆತ್ಮರಕ್ಷಣಾರ್ಥಕ ಮತ್ತು ಉದ್ದೇಶಪೂರ್ವಕ ಎಂದು ನಾಲ್ಕು ಬಗೆಯಾಗಿ ವಿಂಗಡಿಸಿದ್ದಾರೆ. ಒಬ್ಬ ಲೌಕಿಕ ವ್ಯಕ್ತಿ ನಾಲ್ಕನೆಯ ಬಗೆಯ ಹಿಂಸೆಯನ್ನು ಮಾಡಬಾರದೆಂದು ಕ್ರಮ ವಿಧಿಸಲಾಗಿದೆ. ಸನ್ಯಾಸಿಯು ಆ ನಾಲ್ಕೂ ಬಗೆಯ ಹಿಂಸೆ

ಯಿಂದ ವಿಮುಖನಾಗಬೇಕೆಂದು ನಿಯಮವಿದೆ. ಒಬ್ಬ ಬೌದ್ಧ ಸನ್ಯಾಸಿ ತಾನೇ ಯಾವ ಜೀವಿಯನ್ನು ಕೊಲ್ಲ ಕೂಡದು ಅಥವಾ ನೋಯಿಸಕೂಡದು. ಆದರೆ ಆತ ಕಟುಕನಿಂದ ಮಾಂಸವನ್ನು ಕೊಳ್ಳಬಹುದು. ಇದಕ್ಕೆ ವ್ಯತಿರಿಕ್ತವಾಗಿ ಜೈನ ಸನ್ಯಾಸಿಯು ವೀರಶೈವನಂತೆ ಕಟ್ಟಾ ಸಸ್ಯಾಹಾರಿ. ಏಕೆಂದರೆ ಆತ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಜೀವಹಿಂಸೆಯಲ್ಲಿ ಪಾಲ್ಗೊಳ್ಳಲಾರನು. ಬುದ್ಧ ಮತ್ತು ಬಸವ, ಮಹಾವೀರ ಮತ್ತು ಕ್ರಿಸ್ತರ ಅಹಿಂಸೆಯು ವ್ಯಕ್ತಿಯ ಕೈಯಲ್ಲಿ ಆಧ್ಯಾತ್ಮಿಕ ಹಾಗೂ ಸಾಮಾಜಿಕ ಅಸ್ತ್ರವಾಗಿಯೇ ಉಳಿಯಿತು. ಅದು ಗಾಂಧೀಜಿಯಲ್ಲಿ ರಾಜಕೀಯ ಅಸ್ತ್ರವೂ ಆಯಿತು. ಏಕೆಂದರೆ ಅವರು ಅಹಿಂಸೆಯ ಆದರ್ಶವನ್ನೂ ವ್ಯಕ್ತಿಯಿಂದ ರಾಷ್ಟ್ರಕ್ಕೂ ವಿಸ್ತರಿಸಿದರು. ಅದನ್ನು ಕಾರ್ಯಗತಗೊಳಿಸಲು ಸತ್ಯಾಗ್ರಹವೆಂಬ ಹೆಸರಿನ ತಂತ್ರವನ್ನು ರೂಪಿಸಿದರು. ಸತ್ಯಾಗ್ರಹವು ಹಿಂಸಾತ್ಮಕ ಆಕ್ರಮಣದ ವಿರುದ್ಧ ಅಹಿಂಸಾತ್ಮಕ ರಕ್ಷಣೆ. ಅದು ಪ್ರತಿಭಟನೆ ಮತ್ತು ಅಸಹಕಾರಗಳನ್ನು ಹೊಂದಿದ್ದರೂ, ಅವೆರಡೂ ಅಹಿಂಸಾತ್ಮಕವಾದವು. ಸತ್ಯಾಗ್ರಹವು ಬುದ್ಧಿಪೂರ್ವಕವಲ್ಲದ ಮತ್ತು ಇಷ್ಟವಿಲ್ಲದಿದ್ದರೂ ಹಿಂಸೆಯಲ್ಲಿ ಪಾಲ್ಗೊಳ್ಳುವುದರ ವಿರುದ್ಧ ಅಸಮ್ಮತಿಯ ಪ್ರತಿಭಟನೆ. ಆದ್ದರಿಂದ ಆ ಪ್ರತಿಭಟನೆ ಅಹಿಂಸಾತ್ಮಕವಾಗಿರಬೇಕೆಂದು ಹೇಳಬೇಕಿಲ್ಲ. ಗಾಂಧೀಜಿಗೆ ಸತ್ಯ ಮತ್ತು ಅಹಿಂಸೆಗಳು ಎಷ್ಟು ಪರಸ್ಪರ ಹೆಣೆದು ಕೊಂಡಿವೆ ಎಂದರೆ ಅವುಗಳನ್ನು ಬೇರ್ಪಡಿಸುವುದು ಕಷ್ಟ. ಮನುಷ್ಯ ಸಾಧಿಸಬೇಕಾದದ್ದು ಅಹಿಂಸೆಯ ಮೂಲಕವಾದ ಸತ್ಯವನ್ನು ಎಂದು ಗಾಂಧೀಜಿ ಆಗಾಗ್ಗೆ ಹೇಳುತ್ತಿದ್ದರು. ಅವರು ಹೀಗೆಂದಿದ್ದಾರೆ: "ಅಹಿಂಸೆಯು ಶುದ್ಧವಾದ ಸ್ಥಿತಿ. ಇಡೀ ಮಾನವತೆ ಸ್ವಾಭಾವಿಕವಾಗಿ, ತನಗೆ ಅರಿವಿಲ್ಲದೆ ಆ ಗುರಿಯತ್ತಲೇ ಸಾಗುತ್ತದೆ. ಮನುಷ್ಯನು ತಾನೇ ಹಿಂಸೆಯ ಪ್ರತಿರೂಪವಾದರೆ ದೇವನಾಗಲಾರ .... ನಾವು ಪ್ರತೀಕಾರ ಮಾಡುವುದು ನಮ್ಮ ಜೀವನದ ನಿಯಮವೆಂದು ನಟಿಸುತ್ತೇವೆ. ಆದರೆ ಯಾವ ಧರ್ಮದಲ್ಲಿಯೂ ಪ್ರತೀಕಾರ ಭಾವನೆಯು ನಿರ್ಬಂಧವೆಂದೆಣಿಸಿದ್ದು ಕಾಣುವುದಿಲ್ಲ. ಯಾವ ಧರ್ಮದಲ್ಲೇ ಆಗಲಿ ಪ್ರತಿಹಿಂಸೆ ನಿಯಮವಾಗಿಲ್ಲ, ಕ್ಷಮ್ಯವಾಗಿದೆ. ಆದರೆ ಸಂಯಮ ಮಾತ್ರ ಅನಿವಾರ್ಯವಾಗಿದೆ. ನಿಗ್ರಹವು ನಮ್ಮ ಚೇತನದ ನಿಯಮ ಏಕೆಂದರೆ ಉತ್ತಮ ನಿಗ್ರಹವಿಲ್ಲದೆ ಉತ್ತಮವಾದ ಪರಿಪೂರ್ಣತೆಯನ್ನು ದೊರಕಿಸಿಕೊಳ್ಳಲು ಸಾಧ್ಯವಿಲ್ಲ."

ವಿಶ್ವದ ರಾಜಕಾರಣದಲ್ಲಿ ಶಾಂತಿಯು ಮತ್ತೆ ಕೇವಲ ಮುಂದೆ ಬರುತ್ತಿದೆ. ಶಾಂತಿಯನ್ನು ದೊರಕಿಸಿಕೊಳ್ಳಲು ಎಷ್ಟು ಚೆನ್ನಾಗಿ ಸಹಕರಿಸಬೇಕು ಎಂಬುದು ಈ ದಿನದ ಜ್ವಲಂತ ಸಮಸ್ಯೆಯಾಗಿದೆ. ಆಯಾ ರಾಷ್ಟ್ರಗಳ ಸಾಮಾಜಿಕ ಪದ್ಧತಿಗಳನ್ನು ಗಣಿಸದೆ ಅಲ್ಲಿ ಶಾಂತಿಯ ಸಹಬಾಳ್ವೆಯ ನೀತಿಯನ್ನು ಅನುಸರಿಸುವುದು ಮತ್ತು ಒತ್ತಡವನ್ನು ಶಾಶ್ವತ ಶಾಂತಿಯಾಗಿ ಮಾರ್ಪಡಿಸುವ ಉದ್ದೇಶದಿಂದ ರಾಷ್ಟ್ರರಾಷ್ಟ್ರಗಳಲ್ಲಿ ನಂಬಿಕೆಯನ್ನು ರೂಢಿಸುವುದು ಪ್ರಮುಖ ರಾಷ್ಟ್ರಗಳ ಉನ್ನತ ಆಕಾಂಕ್ಷೆಗಳಾಗಿವೆ. ರಾಷ್ಟ್ರಗಳಲ್ಲಿ ಈ ಬದಲಾವಣೆ ಹೇಗೆ ಬಂತು? ಏಕೆಂದರೆ ಅಣುಶಕ್ತಿಯ ಆಯುಧಗಳು ಮಾನವ ಕುಲವನ್ನು "ಮಾನವ ಪರಸ್ಪರ ಪ್ರಯತ್ನದಿಂದ ಶಾಂತಿಯನ್ನು ಗಳಿಸಬೇಕು ಅಥವಾ ಅದನ್ನು ನೀಗಿಕೊಂಡು ಸಂಪೂರ್ಣವಾಗಿ ಜೊತೆಯಾಗಿ ನಾಶಹೊಂದಬೇಕು" ಎಂಬ ಪ್ರತಿಜ್ಞೆಯಿಂದ ಮುಖಾಮುಖಿಯಾಗಿ ಒಂದುಗೂಡುವಂತೆ ಮಾಡಿವೆ. ಪ್ರಸಿದ್ಧ ರಾಜಕವಿಗಳು ಭಾಗವಹಿಸಿದ ಶಾಂತಿಯ ಬಗೆಗಿನ ಒಂದು ವಿಚಾರಗೋಷ್ಠಿ ಇತ್ತೀಚೆಗೆ ನಡೆಯಿತು. ನಿಮ್ಮ ಅಭಿಪ್ರಾಯದಲ್ಲಿ ಇಂದು ರಾಷ್ಟ್ರ ಅಥವಾ ವ್ಯಕ್ತಿ ಕ್ರಿಯಾತ್ಮಕವಾದ ಶಾಂತಿಯನ್ನು ಸಾಧಿಸಲು ನೀಡಬೇಕಾದ ದೊಡ್ಡ ಕಾಣಿಕೆ ಯಾವುದು? ಈ ಪ್ರಶ್ನೆಯನ್ನು ಅವರೆಲ್ಲರ ಮುಂದಿಡಲಾಯಿತು. ಅದಕ್ಕೆ ಅವರೆಲ್ಲರೂ ಶಾಂತಿಯು ಸಾಧಿಸಲಾರದ್ದೇನೂ ಅಲ್ಲ ಎಂದು ಒಮ್ಮತದ ಉತ್ತರ ನೀಡಿದರು. ಯುದ್ಧದ ಕಾರಣಗಳನ್ನು ಪ್ರಪಂಚದಿಂದ ಹೋಗಲಾಡಿಸುವುದರಿಂದ ಮಾತ್ರ ಶಾಂತಿಯು ದೊರಕಲಾರದು. ಪ್ರಪಂಚದಲ್ಲಿ ಶಾಂತಿಯ ಕಾರಣಗಳನ್ನು ಊರ್ಜಿತಗೊಳಿಸುವುದರಿಂದ ಮಾತ್ರ ಅದು ಸಾಧ್ಯ.

ಶಾಂತಿಯ ಬಗ್ಗೆ ಮುಂದಿಟ್ಟ ವಾದಗಳಲ್ಲಿ ಡಾ|| ಆಲ್ಬರ್ಟ್ ಶ್ವಿಜರನದು ಹೆಚ್ಚು ಯುಕ್ತವೂ,

ಶ್ಲಾಘ್ಯವೂ ಆಗಿದೆ: "ತನ್ನೊಳಗೆ ಇರುವ ಹೊಸ ಮನೋಧರ್ಮದಿಂದ ಮಾತ್ರ ಒಂದು ರಾಷ್ಟ್ರ ತನ್ನ ಗಡಿಯೊಳಗೆ ಶಾಂತಿಯನ್ನು ಪಡೆಯಲು ಸಾಧ್ಯ. ಬೇರೆ ಬೇರೆ ರಾಷ್ಟ್ರಗಳೂ ಕೂಡ ತಮ್ಮಲ್ಲಿ ಉಂಟಾಗುವ ಹೊಸ ಮನೋಧರ್ಮದಿಂದ ಮಾತ್ರ ಪರಸ್ಪರ ಸಾಧ್ಯವಾಗುತ್ತದೆ. ಕಡಲಾಚೆಯ ವಿಶ್ವವನ್ನು ಹಿಂದಿನ ಅಥವಾ ಇಂದಿನ ದಿಕ್ಕಿಂತ ಭಿನ್ನವಾದ ಸ್ವಭಾವದಿಂದ ನಡೆಸಿಕೊಳ್ಳುವುದರಿಂದ ಆ ಬಗ್ಗೆ ಹೆಚ್ಚು ಅಪರಾಧಗಳ ಹೊರೆಯನ್ನು ಕಡಿಮೆ ಮಾಡಿಕೊಳ್ಳಬಹುದು. ಹಿಂದೆ ಅಂಥ ನಾಗರಿಕ ರಾಷ್ಟ್ರದ ನೀತಿಯ ಮಾತು ಆಗಾಗ್ಗೆ ಕೇಳಿ ಬರುತ್ತಿತ್ತು. ಅದು ನಿಜ. ಆದರೆ ಈಗ ಆಧುನಿಕ ರಾಷ್ಟ್ರವು ಹಿಂದಿನ ಆಧ್ಯಾತ್ಮಿಕ ಹಾದಿಯಲ್ಲಿ ಮುಂದುವರಿಯಲು ಒಪ್ಪಿದೆ. ದುರವಸ್ಥೆಯಲ್ಲಿ ನಾಶವಾಗುತ್ತಿರುವ ಸಂದರ್ಭದಲ್ಲಿ ಅದಕ್ಕೆ ವಿಶೇಷ ಧ್ವನಿ ಬೇಕಾಗಿದೆ. ಈ ದಿನ ಅದು ಹೊಸದೊಂದು ಅಧಿಕಾರವನ್ನು ಕೂಡ ಪಡೆಯಬೇಕಾಗಿದೆ. ಏಕೆಂದರೆ ಇಂದಿನ ಪ್ರಪಂಚದಲ್ಲಿ ಮತ್ತು ಜೀವನದಲ್ಲಿ ಜೀವನದ ಬಗೆಗಿನ ಗೌರವ, ನೈತಿಕ ಮಟ್ಟವು ಅದರ ಸಂಪೂರ್ಣ ಪ್ರಮಾಣ ಮತ್ತು ಅಗಾಧತೆಯಿಂದ ಕಾಣಿಸಿಕೊಂಡಿದೆ. ಆದ್ದರಿಂದ ನಾವು ನಾಗರಿಕ ರಾಷ್ಟ್ರದ ಬಗ್ಗೆ ರಾಷ್ಟ್ರೀಯತೆಯ ವಿವರಣೆಗಳನ್ನು ಮತ್ತು ರಾಷ್ಟ್ರೀಯ ನಾಗರೀಕತೆಗೆ ಹೊಂದಿಕೆಯಾಗುವ ಯಾವುದೇ ಊಹೆಯನ್ನು ಮಾಡುವ ಕೆಲಸದಿಂದ ಪಾರಾಗಿದ್ದೇವೆ. ಮತ್ತು ನಾವು ನೈತಿಕ ಉತ್ಸಾಹವುಳ್ಳ ನಾಗರೀಕತೆಯ ಮಾರ್ಗದರ್ಶನ ಪಡೆಯುವ ಅವಸ್ಥೆಯೆಂದು ಭಾವಿಸುವ ಅಗಾಧವಾದ ನಿಷ್ಕಪಟವಾದ ಆಲೋಚನೆಯ ಕಡೆ ತಿರುಗಲು ಸ್ವತಂತ್ರರಿದ್ದೇವೆ. ಜೀವನದ ಬಗ್ಗೆ ಇರುವ ಗೌರವದಿಂದ ಮೂಡಿದ ನಾಗರಿಕ ಮನೋಧರ್ಮದ ಸಾಮರ್ಥ್ಯದಲ್ಲಿ ನಂಬಿಕೆಯಿಂದ ನಾವು ಈ ನಾಗರಿಕ ರಾಷ್ಟ್ರವನ್ನು ವಾಸ್ತವವನ್ನಾಗಿ ಮಾಡುವ ಕಾರ್ಯವನ್ನು ಹೊತ್ತುಕೊಳ್ಳುತ್ತೇವೆ.....ಶಾಂತಿ ಒಪ್ಪಂದದ ನಿಯಮಗಳು, ಅವು ಎಷ್ಟೇ ಉದ್ದೇಶ ಪೂರ್ವಕವಾಗಿರಲಿ ಮತ್ತು ಎಷ್ಟೇ ಸಮರ್ಥವಾಗಿ ರಚಿಸಲಿ, ಏನನ್ನೂ ಸಾಧಿಸಲಾರವು. ಜೀವನದ ಬಗ್ಗೆ ಗೌರವವನ್ನುಂಟುಮಾಡುವ ನಿಷ್ಕೃಷ್ಟ ಮನೋಭಾವನೆಗೆ ಅವಕಾಶವೀಯುವ ಆಲೋಚನೆಗಳಿಂದ ಮಾತ್ರ ಮಾನವ ಕುಲಕ್ಕೆ ನಿರಂತರ ಶಾಂತಿಯನ್ನು ತರಲು ಸಾಧ್ಯ."

ಅಮೇರಿಕದ ನಿಯತ ಕಾಲಿಕ ಪತ್ರಿಕೆ 'ಕೊಲ್ಲೈರ್ಸ್'ನ ಸಂಪಾದಕ ಈ ವಿಚಾರಗೋಷ್ಠಿಯನ್ನು ಪರಿಚಯಿಸುತ್ತಾ ಈ ಗಮನಾರ್ಹ ಟೀಕೆ ಮಾಡಿದ್ದಾನೆ: ಒಮ್ಮೆ ದೇವರು ಉರಿಯುವ ಪೊದೆಯಿಂದ ಮೋಸಸನಿಗೆ ಹೇಳಿದಂತೆ ಈ ದಿನ ಮಾನವ ಕುಲಕ್ಕೆ ನಮ್ಮ ಆಕಾಶವನ್ನು ನೆನೆಸುವ ನೀಲ ಮೋಡದಿಂದ ಮಾತನಾಡಬೇಕು. ವಾಸ್ತವವಾಗಿ ಈ ದಿನ ಅಣುವಿನ ಬೆಂಕಿ ತಮ್ಮ ಆಧ್ಯಾತ್ಮಿಕ ಚೈತನ್ಯವನ್ನು ಮತ್ತೆ ಪಡೆಯಲು ಮತ್ತು ಪ್ರಪಂಚದಲ್ಲಿ ಶಾಂತಿಯನ್ನು ಮೂಡಿಸುವ ಜವಾಬ್ದಾರಿಯನ್ನು ಸಮವಾಗಿ ಎದುರಿಸಲು ಎಲ್ಲ ಮಾನವ ಕುಲಕ್ಕೆ ಸಮವಾಗಿದೆ. ಹಿಂಸೆಯು ಯಾವುದೇ ರೂಪ ಮತ್ತು ಮಟ್ಟದಲ್ಲಿ ಇರಲಿ ಮಾನವ ಕುಲಕ್ಕೆ ನಿತ್ಯವಾದ ಒಳಿತನ್ನು ತರಲಾರದು. ಅಹಿಂಸೆಯು ಮಾತ್ರ ಜೀವನದ ಬಗೆಗಿನ ಗೌರವಪೂರ್ವಕ ಮನೋಧರ್ಮವನ್ನು ಸ್ಥಿರವಾಗಿಸುತ್ತದೆ. ಅರ್ಥಶಾಸ್ತ್ರ, ರಾಜನೀತಿ ಮತ್ತು ವಿಜ್ಞಾನಕ್ಕೆ ಸಂಬಂಧಿಸಿದ ಜನರು ಬರೀ ಕಲಾಯಿಗಾರರು. ಅವರು ರೂಪವನ್ನು ಮಾರ್ಪಡಿಸಲಾರರು. ಇವರಿಲ್ಲದೆ ಆಧುನಿಕ ನಾಗರಿಕತೆ ಸಾಗಲಾರದು. ಅವರಿಂದ ಮಾತ್ರ ಅದು ಕುಸಿದು ಬೀಳುವುದು. ಹೃದಯ ಪರಿವರ್ತನೆಯಂಥ ಕಷ್ಟಕರವಾದ ರಸತಂತ್ರ ಸಾಧು-ಸಂತರಿಗೆ ಮಾತ್ರ ತಿಳಿಯುತ್ತದೆ. ಅವರಿಗೆ ಸಮರ್ಪಕ ಜ್ಞಾನವಿರುತ್ತದೆ. ಮತ್ತು ಅವರು ಸಮರ್ಪಕವಾಗಿ ಕೆಲಸ ಮಾಡುತ್ತಾರೆ. ಮಾನವತೆಯನ್ನು ಅದರಿಂದಾಚೆಗೆ ಏರಿಸುವುದು ಇಡೀ ಜೀವನಕ್ಕೆ ಕೊಟ್ಟ ಆಧ್ಯಾತ್ಮಿಕ ನಿರ್ದೇಶನ ಎಂಬುದನ್ನೂ ಅವರು ತಿಳಿದಿದ್ದಾರೆ.

(ಸಶೇಷ)



# ಶನಿವಾರಸಿದ್ಧಿ

— ಆರ್. ರಾಜಪ್ಪ, ಎಂ.ಎ.,

ಕನ್ನಡನಾಡಿನ ಇತಿಹಾಸದಲ್ಲಿ ಕದಂಬ, ಗಂಗ, ಚಾಳುಕ್ಯ, ರಾಷ್ಟ್ರಕೂಟ, ಹೊಯ್ಸಳ ಮುಂತಾದ ಪ್ರಮುಖ ರಾಜಮನೆತನಗಳೂ ಅಲ್ಲಲ್ಲಿ ತಲೆಯೆತ್ತಿದ ಮಾಂಡಳಿಕ ವಂಶಗಳೆನಿಸಿದ (ಕೆಲಕಾಲ ಸ್ವತಂತ್ರರಾಗಿದ್ದ) ಶಿಲಹಾರರು ಬಾಣರು, ಶಾತವಾಹನರು, ರಟ್ಟರು, ಕಲಚುರಿಗಳು ಮೊದಲಾದ ಮನೆತನಗಳೂ ನಮ್ಮ ಗಮನ ಸೆಳೆಯುತ್ತವೆ. ಈ ಎಲ್ಲ ರಾಜವಂಶಗಳೂ ಕಲೆ, ಧರ್ಮ, ಜನಜೀವನದ ವಿಕಾಸನಕ್ಕೆ ಶ್ರಮಿಸಿವೆ. ಇವುಗಳ ರಾಜಕೀಯ ಚರಿತ್ರೆಯನ್ನು ನಿರೂಪಿಸುವ ಅನೇಕ ಗ್ರಂಥಗಳು ದೊರೆಯುತ್ತವೆ. ಕೆಲವೊಂದು ಕೃತಿಗಳಲ್ಲಿ ಕಲೆ, ಧರ್ಮ, ಸಂಸ್ಕೃತಿಗಳನ್ನು ವಿಚಾರ ಮಾಡಿರುವುದೂ ಉಂಟು.* ಈ ಎಲ್ಲಾ ಕೃತಿಗಳಿಗೂ ಬಹುಮಟ್ಟಿಗೆ ಶಾಸನಗಳು ಆಧಾರವಾಗಿರುವುದು ಗಮನಾರ್ಹ ಸಂಗತಿ. ನಮ್ಮ ನಾಡಿನ ಜನಜೀವನ, ಧರ್ಮ, ಸಂಸ್ಕೃತಿಯನ್ನು ತಿಳಿಯಲು ನಾವು ಶಾಸನಗಳಿಗೆ ಶರಣುಹೋಗಬೇಕು. ಕನ್ನಡನಾಡಿನಲ್ಲಿ ಶಾಸನ ಸಾಹಿತ್ಯ ವಿಪುಲವಾಗಿದೆ. ಒಟ್ಟು ಶಾಸನಗಳನ್ನು ಗಮನಿಸಿದಾಗ ಹಳ್ಳಿಗೊಂದರಂತೆಯಾದರೂ ದೊರೆಯುತ್ತವೆ. ಅವುಗಳಲ್ಲಿ ಆಯಾ ಕಾಲದಲ್ಲಿ ನಡೆದ ಘಟನೆಗಳ ವಿವರಣೆ, ಅಂದಿನ ಜನರು ಆಚರಣೆಯಲ್ಲಿಟ್ಟಿದ್ದ ಸಂಪ್ರದಾಯಗಳು, ಆ ಕಾಲದ ಜನಜೀವನದ ಸ್ಪಷ್ಟ ಪರಿಚಯ ನಮಗಾಗುತ್ತದೆ. ಈ ಶಾಸನಗಳಲ್ಲಿ ದಾನ ಅಥವಾ ದತ್ತಿ ಶಾಸನ, ವೀರಗಲ್ಲು, ಮಹಾಸತಿಕಲ್ಲು, ವಿಜಯಸ್ತಂಭ ಮೊದಲಾದುವು ಮುಖ್ಯವಾದುವುಗಳು. ಶಾಸನಗಳನ್ನು (Inscriptions) ಕುರಿತು "Documents inscribed on some hard or permanent material in the form of letters or other conventional signs, for the purpose of conveying some information or preserving a record"[1] ಎಂಬ ವಿವರಣೆ ಇಂಗ್ಲೀಷ್ ವಿಶ್ವ ಕೋಶದಲ್ಲಿ ದೊರೆಯುತ್ತದೆ. ಶಾಸನ ಎಂದರೇನು? ಎಂಬ ಪ್ರಶ್ನೆ ಉದ್ಭವಿಸಿದಾಗ ಈ ವಿವರಣೆಯೂ ಸಾಧ್ಯವಾಗುತ್ತದೆ. "ಶಾಸನಗಳು ಮೊದಲು ರಾಜಾಜ್ಞೆಗಳಾಗಿದ್ದವು. ('ಶಾಸ್' ಎಂಬ ಧಾತುವಿಗೆ, ಆಜ್ಞೆಮಾಡು, ಶಿಕ್ಷಿಸು, ನಿಯಂತ್ರಿಸು ಮುಂತಾದ ಅರ್ಥಗಳಿವೆ.) ಕಾನೂನನ್ನು ಜನರಿಗೆ ಪ್ರಕಟಿಸುವ ಬರಹಗಳೇ ಈ ಶಾಸನಗಳು. ರಾಜನೇ ಆಗಲಿ ಅಥವಾ ಬೇರೆಯವರು ಯಾರೇ ಆಗಲಿ ಅವರು ದಾನವನ್ನು ಕೊಟ್ಟಾಗ, ದಾನದ ವಿಷಯದಲ್ಲಿ ಕೆಲವು ನಿಯಮಗಳನ್ನು ಹಾಕಿ, ಆ ನಿಯಮಗಳನ್ನು ಯಾರೂ ಉಲ್ಲಂಘಿಸಕೂಡದೆಂದೂ, ಎಲ್ಲರೂ ಆ ದಾನವನ್ನು ಕಾಪಾಡಿಕೊಂಡು ಬರಬೇಕೆಂದೂ ಕೇಳಿಕೊಳ್ಳುತ್ತಿದ್ದರು. ಅಥವಾ ಆಜ್ಞೆ ಮಾಡುತ್ತಿದ್ದರು. ಅಲ್ಲದೆ ದಾನವಾಗಿ ಕೊಟ್ಟ ಭೂಮಿಗೆ ತೆರಿಗೆಯನ್ನು ತೆಗೆದುಹಾಕಿದ ಆಜ್ಞೆಯನ್ನು ರಾಜನೋ ಅವನ ಅಧಿಕಾರಿಗಳೋ ಹೊರಡಿಸುತ್ತಿದ್ದರು. ಹೀಗೆ ಪರ್ಯಾಯವಾಗಿ ಇಂತಹ ಇತರ ಬರಹಗಳಿಗೂ ಶಾಸನಗಳೆಂಬ ಹೆಸರು ರೂಢಿಗೆ ಬಂದಿತು. ಈ ಅರ್ಥವು ಇನ್ನೂ ವಿಸ್ತಾರವಾಗಿ ರಾಜರ ಪ್ರಶಸ್ತಿಯನ್ನು ಹೇಳುವ, ವೀರರ ಸಾವನ್ನು; ಸನ್ಯಾಸಿಗಳ ಮರಣವನ್ನು ಕೊನೆಗೆ ಶಿಲ್ಪದ

* ಉದಾ: ಡಾ|| ಫ್ಲೀಟ್, ವಿನ್ಸೆಂಟ್ ಸ್ಮಿತ್, ರೈಸ್, ಮೋರೆಸ್, ಡೆರೆಟ್, ಹಯವದನ ರಾವ್, ಡಾ|| ಶ್ರೀಕಂಠ ಶಾಸ್ತ್ರಿ, ಆಲೂರು ವೆಂಕಟರಾಯರು, ಆರ್. ಎಸ್. ಪಂಚಮುಖಿ, ಎಸ್. ಲಕ್ಷ್ಮೀನಾರಾಯಣ ರಾವ್ ಮೊದಲಾದವರ ಕೃತಿಗಳನ್ನು ಗಮನಿಸಬಹುದು.

1 Encyclopaedia Britanica: XII, Page 393

೧೧೪

ಅಥವಾ ಶಿಲ್ಪಿಯ ಹೆಸರನ್ನು ಹೇಳುವ ಬರಹಗಳಿಗೂ 'ಶಾಸನ' ಎಂಬ ಹೆಸರು ಅನ್ವಯವಾಯಿತು." [2]

ಇಂತಹ ಶಾಸನಗಳು ಇತಿಹಾಸ ಸಾಕ್ಷಿಯಾಗಿ, ಸಂಸ್ಕೃತಿಯ ದ್ಯೋತಕವಾಗಿ, ಜನಜೀವನದ ಪ್ರತಿನಿಧಿಯಾಗಿ ನಿಂತಿವೆ. ಈ ಶಾಸನಗಳಲ್ಲಿಯೇ ರಾಜರ ಹೊಗಳಿಕೆ, ಅವರ ಬಿರುದುಗಳು ಬಂದಿರುವುದುಂಟು. ಬಿರುದುಗಳು ಆಯಾ ರಾಜರುಗಳ ಜೀವನ ಕಾಲದಲ್ಲಿನ ಮುಖ್ಯ ಘಟನೆಗಳ; ಅವರು ಗಳಿಸಿದ ವಿಜಯದ ಪ್ರತೀಕವಾಗಿ ಬರಬಹುದು. ಜಯ ಗಳಿಸಿದಾಗ ತಾವು ಗೆದ್ದ ರಾಜನಿಗಿರುವ ಬಿರುದುಗಳನ್ನು ಪರ್ಯಾಯವಾಗಿ ತಾವುಗಳು ತಮ್ಮ ಹೆಸರಿನ ಹಿಂದೆ ಸೇರಿಸಿಕೊಳ್ಳುವುದೂ ಉಂಟು. ಇಂತಹ ಬಿರುದುಗಳಲ್ಲಿ ಒಂದೆನಿಸಿದ **'ಶನಿವಾರಸಿದ್ಧಿ'** ವಿಷಯವಾಗಿ ವಿಚಾರಮಾಡುವ ಉದ್ದೇಶ ಈ ಲೇಖನದ್ದಾಗಿದೆ.

ಶಾಸನಾಭ್ಯಾಸದಲ್ಲಿ ತೊಡಗಿರುವ ಸಮಯದಲ್ಲಿ ಕಲಚುರಿ ರಾಜನಾದ ಬಿಜ್ಜಳನ ಕುರಿತಾದ ಶಾಸನಗಳಲ್ಲಿ ಅವನ ಬಿರುದುಗಳಲ್ಲಿ ಒಂದಾಗಿರುವ **'ಶನಿವಾರಸಿದ್ಧಿ'** ನನ್ನ ಗಮನ ಸೆಳೆಯಿತು. ಅದರ ಬಗೆಗೆ ಯಾವ ವಿವರಣೆಯೂ ತತ್‌ಕ್ಷಣದಲ್ಲಿ ದೊರೆಯಲಿಲ್ಲ. ಶಾಸನಗಳ ಬಗೆಗೆ ವಿಶಿಷ್ಟ ಅಧ್ಯಯನ ನಡೆಸಿರುವ ಸನ್ಮಾನ್ಯ ಡಾ|| ಎಂ. ಚಿದಾನಂದಮೂರ್ತಿಯವರಲ್ಲಿ ತಿಳಿಸಿದಾಗ ಅವರು ಆ ವಿಷಯದ ಬಗೆಗೆ ಯಾವುದೇ ವಿವರಣೆಯನ್ನು ಹೇಳುವ ಬದಲು ನನ್ನನ್ನು ಪ್ರೋತ್ಸಾಹಿಸಿ ಅದರ ಎಲ್ಲ ವಿಷಯಗಳನ್ನು ಸಂಗ್ರಹಿಸಿ ಒಂದು ಲೇಖನವನ್ನು ತಯಾರು ಮಾಡಲು ಹೇಳಿದರು. ಅವರ ಪ್ರೋತ್ಸಾಹ, ಉತ್ತೇಜನಪೂರ್ವವಾದ ಮಾರ್ಗದರ್ಶನದಿಂದ ನಾನು ಸಂಗ್ರಹಿಸಿದ ವಿಷಯಗಳನ್ನು ಸಹೃದಯರ ಅವಗಾಹನೆಗೆ ಇಟ್ಟಿದ್ದೇನೆ.

**'ಶನಿವಾರಸಿದ್ಧಿ'** ಒಂದು ಬಿರುದು ಎಂಬ ಅಂಶ ನಿರ್ವಿವಾದವಾದುದು. ಆದರೆ ಆ ಬಿರುದು ಯಾವುದೇ ರಾಜನಿಗಾಗಲಿ, ಯಾವ ಕಾರಣದಿಂದ ಬಂದಿತೆಂಬ ವಿಷಯ ಅಸ್ಪಷ್ಟವಾಗಿಯೇ ಉಳಿದಿದೆ. **'ಶನಿವಾರಸಿದ್ಧಿ'**ಯ ಮೂಲವನ್ನು ಹುಡುಕುವಾಗ ಶಿಲಹಾರ ರಾಜನಾದ 'ಅಪರಾಜಿತದೇವ'ನ ಬಿರುದುಗಳಲ್ಲಿ **'ಶನಿವಾರ ವಿಜಯ'** ಎಂಬ ಮಾತು ಬಂದಿದೆ. ಸುಮಾರು ಕ್ರಿ.ಶ. 997ರ ಶಾಸನದಲ್ಲಿ[3] ಈ ರೀತಿ ಇದೆ :

"ಸಮುಧಿಗತ ಪಂಚಮಹಾ ಸಬ್ದ(ಬ್ದ) ಮಹಾ
ಸಾಮಂತಾಧಿಪತಿ
ಕಗರಪುರ ಪರಮೇಶ್ವರ ಶಿಲಾರ ನರೇಂದ್ರ
ಜೀಮೂತವಾಹನಾ
ನ್ವಯಪ್ರಸೂತ ಸುವರ್ಣ ಗರುಡಧ್ವಜ ಅಭಿಮಾನ
ಮಹೋಧದಿ
ಮ್ಮಾಳಗಳ ಗಂಡ ಗಂಡ ಕಂದರ್ಪ ಸಹಜ ವಿದ್ಯಾಧರ
ಅಪರದಿಗ್ವದೂ
ತಿಲಕ ನನ್ನಿಸಮುದ್ರ ಪ್ರತಾಪಮಾರ್ತಾಂಡ
**'ಶನಿವಾರವಿಜಯ'**
ಆದಿ ಸಮಸ್ತರಾಜಾವಳಿಸಮಲಂಕೃತ ಮಹಾ
ಮಂಡಲೇಶ್ವರ
ಶ್ರೀಮತ್ ಅಪರಾಜಿತ ದೇವರಾಜ."

ಈ ಶಾಸನದಲ್ಲಿ **'ಶನಿವಾರವಿಜಯ'** ಎಂಬ ಮಾತು ಅಪರಾಜಿತದೇವನ ರಾಜಾವಳಿಗಳಲ್ಲಿ ಒಂದಾಗಿ ಬಂದಿದೆ ಎಂಬ ಅಂಶ ಸ್ಪಷ್ಟವಾಗಿದೆ. ಈ ಶಾಸನವನ್ನು ಸಂಪಾದಿಸಿ, ಇ. ಹುಲ್ಷ್ (E. Hultzsch)ರವರು ಅದರ ಅಡಿ ಟಿಪ್ಪಣಿಯಲ್ಲಿ "with this title, for which I cannot offer any suitable explanation (Compare Sanivara-siddi : Page 208 above note 5) ಎಂದು ಹೇಳುತ್ತಾ "The two birudus might mean "One who is Victorious" and "one who is successful (even) on (an unlucky day like) Saturday"[4] ಎಂದು

2 ಡಾ|| ಎಂ. ಚಿದಾನಂದಮೂರ್ತಿ:
ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧೫.
ಪ್ರಕಟಣೆಯ ಕಾಲ: ೧೯೬೯
ಪ್ರಕಟಣೆಯ ಸ್ಥಳ: ಮೈಸೂರು.

3 Epigraphia Indica : Vol. III, No. 37, Page 269-273.

4 Epigraphia Indica : Vol. III, Page 269.

ವಿವರಣೆ ನೀಡುತ್ತಾರೆ. ಮೇಲೆ ಹೇಳಿರುವ '**ಶನಿವಾರ ಸಿದ್ಧಿ**' ಉದಾಹರಣೆಯನ್ನು ಗಮನಿಸುವಾಗ ಅದು ಕೊಲ್ಲಾಪುರದ ಶಿಲಹಾರರ ವಿಜಯಾದಿತ್ಯನ ಕುರಿತಾದ ಕ್ರಿ. ಶ. 1143ರ ಶಾಸನವೆಂಬುದು ತಿಳಿಯುತ್ತದೆ. ಈ ಶಿಲಹಾರವಂಶ ಜತ್ತಿಗನಿಂದ ಆರಂಭವಾಗಿ ಗಾಂಧಾರಾದಿತ್ಯನವರಿಗೆ ಬರುತ್ತದೆ. ಈ ಮಧ್ಯೆ ಬರುವ ವಿಜಯಾದಿತ್ಯನಿಗೆ '**ಶನಿವಾರಸಿದ್ಧಿ**' ಎಂಬ ಬಿರುದು ಇತ್ತೆಂದು ಕಂಡು ಬರುತ್ತದೆ.[5] ಇದರ ಅಡಿ ಟಿಪ್ಪಣಿಯಲ್ಲಿ ಶಾಸನವನ್ನು ಸಂಪಾದಿಸಿದ ಎಫ್. ಕೀಲ್‌ಹಾರ್ನ್‌ರವರು ಇದರ ವಿವರಣೆಯನ್ನು "he whose desires (or wishes) are accomplished on Saturday" ಎಂದು ನೀಡುತ್ತಾ ಇಂಡಿಯನ್ ಆಂಟಿಕ್ವರಿ ಎರಡನೆ ಭಾಗದಲ್ಲಿನ ಒಂದಂಶವನ್ನು ಆಧಾರವಾಗಿ ಕೊಡುತ್ತಾರೆ. ಅದರಲ್ಲಿ ಈ ವಿಷಯದ ಬಗೆಗೆ ಈ ರೀತಿ ಹೇಳಿದೆ. 'Sri Vira ballala deva who is adorned with all the glorious titles commencing with the refuge of the whole earth, the favourite of the world, the supreme king of the great kings· "**Sani vara Siddhi**"; the conqueror of wise forts, a very Rama in war .... [6] ಎಂದು ಮುಂತಾದ ಬಿರುದುಗಳನ್ನು ಹೇಳಲಾಗಿದೆ. ಇದರ ಅಡಿ ಟಿಪ್ಪಣಿಯಲ್ಲಿ "**ಶನಿವಾರಸಿದ್ಧಿ**" ಎಂಬ ಬಿರುದಿಗೆ 'He whose wishes are accomplished on a Saturday" ಎಂದು ವಿವರಣೆ ಹೇಳಿದೆ.

ಈ ಎಲ್ಲ ವಿವರಣೆಗಳನ್ನು ಗಮನಿಸಿದಾಗ 'ಶನಿವಾರ' ನಮ್ಮ ಸಂಪ್ರದಾಯದಲ್ಲಿ ಅಶುಭ ದಿವಸ. ಆ ದಿನ ಯಾವ ಶುಭ ಕೆಲಸವನ್ನೂ ಮಾಡಬಾರದು. ಮಾಡಿದರೂ ಅದು ಶ್ರೇಯಸ್ಕರವಲ್ಲ ಎಂಬ ನಂಬಿಕೆ ಇದೆ.* ಅಂತಹ ಅಶುಭವೆಂದೆಣಿಸಿದ ದಿವಸದಲ್ಲಿಯೂ ಶುಭ ಸಾಧಿಸಿದವನೆಂಬುದಾಗಿ ಈ ಬಿರುದು ಒಂದಿರಬೇಕು. ಆದರೆ ಈ ಬಿರುದು ಯಾವಾಗ ಹೇಗೆ ಬಂದಿತೆಂಬುದು ಇನ್ನೂ ಕಾಲದ ತೆರೆಯ ಮರೆಯಲ್ಲಿದೆ.

ಈ ಶನಿವಾರ ವಿಜಯ ಅಥವಾ ಸಿದ್ಧಿಯನ್ನು ಕುರಿತು ಹೇಳುವಾಗ ಹುಲ್ಷ್‌ರವರು ಚೋಳರಾಜರಲ್ಲಿ ಒಬ್ಬನಾದ ವೀರ ಚಂಪರಾಜನಿಗಿರುವ "ನಿದ್ರಾವಸಾನ ವಿಜಯ" ಎಂಬ ಬಿರುದನ್ನು ಹೇಳಿ ಅದನ್ನು ಇದಕ್ಕೆ ಅನ್ವಯಿಸಬಹುದೆಂದು ಹೇಳಿದ್ದಾರೆ— ಎಪಿಗ್ರಫಿಯಾ ಇಂಡಿಕಾ ಮೂರನೇ ಭಾಗದಲ್ಲಿನ ಬಿಲ್ವನಾಥೇಶ್ವರ ಶಾಸನದಲ್ಲಿ ಬರುವ "the second name Nidrava sana Vijaya Mandapa" ಎಂಬ ಬಿರುದಿನ ವಿವರಣೆಯನ್ನು 'The name means victorious at the completion of sleep"[7] ಎಂದು ಹೇಳಿರುವಲ್ಲಿ ನಿದ್ರಾವಸಾನ ಕಾಲದಲ್ಲಿಯೂ ಜಯಗಳಿಸುವ ಚಾತುರ್ಯ; ಶಕ್ತಿ ಉಳ್ಳವನು ಎಂದು ತಿಳಿಯುತ್ತದೆ. ಹಾಗೆಯೇ ಭಾರತೀಯ ಸಂಪ್ರದಾಯದಲ್ಲಿ ಅಶುಭವೆನಿಸುವ ಶನಿವಾರವೂ ವಿಜಯ-ಸಿದ್ಧಿ-ಯನ್ನು ಗಳಿಸುವ ಬಲ ಉಳ್ಳವನು ಎಂದು ಅರ್ಥ ಮಾಡಬಹುದು.

---

5. Epigraphia Indica: Vol. III, page 207-208.
6. Indian Antiquary: Vol. II, Page 303.

* ರನ್ನನ ೨ನೇ ಆಶ್ವಾಸದ ೨೬ನೇ ಪದ್ಯದಲ್ಲಿ "ವಡ್ಡವಾರ" ಶಬ್ದ ಬಂದಿದೆ. ಇದರ ಬಗ್ಗೆ ಡಿ. ಎಲ್. ಎನ್. ರವರು ಕನ್ನಡ ಗ್ರಂಥ ಸಂಪಾದನೆಯಲ್ಲಿ ೪ನೇ ಅಡಿಟಿಪ್ಪಣಿಯಲ್ಲಿ 'ವಡ್ಡವಾರವೆಂದರೆ ಸಾಮಾನ್ಯವಾಗಿ ಶನಿವಾರವೆಂದು' ಅನೇಕ ವಿದ್ವಾಂಸರು ತೀರ್ಮಾನಿಸಿರುವುದನ್ನು ಹೇಳಿದ್ದಾರೆ ಅಲ್ಲದೆ "ಕುಜನ ವಾರವನ್ನು ಕುಜವಾರವೆಂದಾಗಲಿ, ಶನಿಯ ವಾರವನ್ನು ಶನಿವಾರವೆಂದಾಗಲಿ ಕರೆಯಬಾರದು. ಅವು ಕ್ರೂರಗ್ರಹಗಳು ಆದ್ದರಿಂದ ತೊಂದರೆಯುಂಟಾಗ ಬಹುದು. ಈ ಹೆಸರುಗಳನ್ನು ಮರೆಮಾಡಿ ಮಂಗಳವಾರ ವಡ್ಡವಾರವೆಂದೂ ಕರೆದರೆ ಆ ಗ್ರಹಗಳಿಗೂ ತೃಪ್ತಿ; ಕರೆದವರಿಗೂ ಕ್ಷೇಮ" ಎಂದಿದ್ದಾರೆ. ಶನಿವಾರ ಅಶುಭವಾದದ್ದು ಎಂಬ ಅಂಶ ಇಲ್ಲಿದೆ.

7. Ep, In., Vol. III, page 70-71-72; 1236 A.D. No. 12 'Three Inscriptions of Chola Chiefs.' Edt. by T. D. Krishnaswamy.

ಈ ಬಿರುದಿನ ಬಗೆಗೆ ವಿವರಣೆಯನ್ನು ಕೇಳಿ ಪ್ರೊ|| ಎನ್. ಲಕ್ಷ್ಮೀನಾರಾಯಣರಾವ್‌ರವರಿಗೆ ನಾನು ಬರೆದ ಪತ್ರಕ್ಕೆ ಅವರು ಈ ರೀತಿ ವಿವರಣೆಯನ್ನು ಕೊಟ್ಟಿದ್ದಾರೆ. 'The birudu of Sanivarasiddhi is found in inscriptions of the Sila haras, the Kalachuryas, and the Hoysalas applied to various kings. It ha en translated as 'successful (even) on Saturday." As it is borne by many kings; it is apparent that every one of them could not have achived victory on a Saturday. I think it refers to the strength and powers of the king who could obtain success even against heavy odds. You might be aware that Saturdays are not considered to be auspicious for undertaking any important exploit or worthy deed. So, a person who could achive success even on Saturdays that is against heavy odds might have been spoken as Sanivara Siddhi."[8]

ಇದನ್ನೆಲ್ಲಾ ಗಮನಿಸಿದಾಗ ಒಬ್ಬ ದೊರೆ ಇನ್ನೊಬ್ಬ ದೊರೆಯನ್ನು ಗೆದ್ದಾಗ ಅವನಿಗಿರುವ ಬಿರುದುಗಳನ್ನೆಲ್ಲಾ ತಾನು ಗ್ರಹಿಸುತ್ತಿದ್ದುದು ಉಂಟು. ಹಾಗಾಗಿ ಈ ಬಿರುದು ಎಲ್ಲ ರಾಜರಿಗೂ ಬಂದಿರಬೇಕು. ಅಲ್ಲದೆ ಆಯಾ ರಾಜರ ಪರಾಕ್ರಮ, ಶಕ್ತಿಯನ್ನು ತಿಳಿಸುವುದಕ್ಕಾಗಿ ಉಪಯೋಗಿಸಿದ್ದಿರಬೇಕೆಂಬಂಶ ವ್ಯಕ್ತವಾಗುತ್ತದೆ.

ಈ ಬಿರುದು ಉತ್ತರ ಭಾರತದ ಯಾವ ರಾಜರೂ ಇಟ್ಟುಕೊಂಡಿರುವುದು ಕಂಡುಬರುವುದಿಲ್ಲ. ಅಂತೆಯೇ ಚಾಲುಕ್ಯರೂ ಈ ಬಿರುದನ್ನು ಇಟ್ಟುಕೊಂಡಂತಿಲ್ಲ. ಆದರೆ ಶಿಲಹಾರರ ಅಪರಾಜಿತ ದೇವನಿಗಿದ್ದುದಕ್ಕೆ ಆಧಾರವಿದೆ. ಅನಂತರ ಕಲಚುರಿಯ ಪೆರ್ಮಾಡಿ, ಬಿಜ್ಜಳ, ಸೋಯಿದೇವನಿಗೆ ಈ ಬಿರುದು ಕಂಡು ಬರುತ್ತದೆ. ಮುಂದೆ ಹೊಯ್ಸಳರಲ್ಲಿ ಈ ಬಿರುದಿನ ಬಳಕೆ ಬಂದಿದೆ. ಈ ಅಂಶಗಳನ್ನು ಗಮನಿಸಿದಾಗ ಈ ಬಿರುದು ತಾವು ತಾವೇ ಇಟ್ಟುಕೊಂಡುದೇನೋ ಎಂಬ ಅನುಮಾನ ಬರುತ್ತದೆ.

### 'ಶನಿವಾರಸಿದ್ಧಿ' ಇರುವ ಕಲಚುರಿ ರಾಜರ ಶಾಸನಗಳು

ಚಾಲುಕ್ಯರ ಆರನೇ ವಿಕ್ರಮಾದಿತ್ಯನು ಆಳುವ ಕಾಲಕ್ಕೆ ಅಂದರೆ 1084ರಲ್ಲಿ ಆಹವಮಲ್ಲ ಪೆರ್ಮಾಡಿಗೆ ಈ ಬಿರುದು ಇದ್ದಹಾಗೆ ಒಂದು ಶಾಸನದಲ್ಲಿ ಕಂಡು ಬರುತ್ತದೆ:

"ಸಮಧಿಗತ ಪಂಚಮಹಾಶಬ್ದ ಮಹಾಮಣ್ಡಳೇಶ್ವರಂ ಪ್ರತಾಪಮಹೇಶ್ವರಂ ವೈರಿನಾರಾಯಣಂ ನೀತಿಪಾರಾಯಣಂ ರಿಪು ಹೃದಯಸಲ್ಲ (ಸೊಲ್ಲಿವಕ್ಕೆ) ಮಲ್ಲಂ ಚಾಳುಕ್ಯರಾಜಾಭಿವೃದ್ಧಿ 'ಶನಿವಾರಸಿದ್ಧಿ' ಶ್ರೀಮನ್ಮಹಾಮಣ್ಡಳೇಶ್ವರ ಆಹವಮಲ್ಲ ಪೆರ್ಮಾನಡಿಗ......"[9]

ಎಂಬಲ್ಲಿ ಚಾಲುಕ್ಯರಾಜರ ಮಹಾಮಂಡಲೇಶ್ವರನಾಗಿದ್ದ ಕಲಚುರಿ ಪೆರ್ಮಾಡಿಗೆ ಈ ಬಿರುದು ಇರುವ ಅಂಶ ಸ್ಪಷ್ಟವಾಗುತ್ತದೆ. ಈ ಬಿರುದು ಇವನ ಮಗನಾದ ಬಿಜ್ಜಳನಿಗೂ ಇರುವುದು ಕಾಣುತ್ತದೆ.

"ದಾರುಕ ತೂರ್ಯನಿರ್ಘೋಷಣಂ ಕಳಚುರಿಕುಳಕಮಳ
ಮಾರ್ತಾಂಡಂ
ಕದನಪ್ರಚಂಡಂ ಮಾನಕನಕಾಚಳಂ ಸುಭಟರಾದಿತ್ಯಂ
ಕಲಿಗಳಂಕುಶಂ
ಗಜಸಾಮಂತ ಶರಣಾಗತ ವಜ್ರ ಪಂಜರ ಪ್ರತಾಪ
ಲಂಕೇಶ್ವರಂ ಪರನಾರೀ
ಸೋದರಂ 'ಶನಿವಾರಸಿದ್ಧಿ' ಗಿರಿದುರ್ಗಮಲ್ಲಂ
ಛಲದಂಕರಾಮಂ
ವೈರೀಭಕಣ್ಠೀರವಂ ನಿಶ್ಶಂಕಮಲ್ಲ ನಾಮಾದಿಪ್ರಶಸ್ತಿ
ಸಹಿತ
ಶ್ರೀಮದ್ಭುಜಬಳಚಕ್ರವರ್ತಿ ತ್ರಿಭುವನಮಲ್ಲ
ಬಿಜ್ಜಣದೇವ "[10]

8. ದಿನಾಂಕ: ೧೦-೭-೬೯ರಲ್ಲಿ ನನಗೆ ಬರೆದ ಪತ್ರದ ಒಕ್ಕಣೆ.

9. Ep. Car. XII.
10. Ep. Car. XI: ದಾವಣಗೆರೆ ಶಾಸನ: ನಂ. 42, ಪುಟ 122, ಕ್ರಿ.ಶ. 1162.

ಇಲ್ಲಿ ಚಾಲುಕ್ಯರನ್ನು ಹತ್ತಿಕ್ಕಿ ತಾನೇ ಚಕ್ರವರ್ತಿ ಎಂದು ಘೋಷಿಸಿಕೊಂಡು ತನ್ನ ತಂದೆ ತಳೆದಿದ್ದ ಶನಿವಾರಸಿದ್ಧಿ ಬಿರುದನ್ನು ತಾನೂ ತಳೆದಿರುವಂತೆ ತಿಳಿಯುತ್ತದೆ. ಬಿಜ್ಜಳ ನಂತೆಯೆ ಅವನ ಮಗ ಸೋಯಿದೇವನೂ ಈ ಬಿರುದನ್ನು ತಳೆದಿರುವುದು ಸ್ಪಷ್ಟವಾಗಿದೆ:

"ಸಮಸ್ತಭುವನಾಶ್ರಯಂ ಪೃಥ್ವೀವಲ್ಲಭಂ
ಮಹಾರಾಜಾಧಿರಾಜ
ಪರಮೇಶ್ವರ ಕಾಳಾಂಜರಪುರವರಾಧೀಶ್ವರ
ಸವರ್ಣ್ಣವೃಷಭಧ್ವಜಡಮ
ರುಗ ತೂರ್ಯ್ಯ ನಿರ್ಗ್ಘೋಷಣಕದನಪ್ರಚಂಡ
ಮಾನಕನಕಾಚಳಸುಭಟ
ರಾದಿತ್ಯಕಲಿಗಳಂಕುಸ '**ಶನಿವಾರಸಿದ್ಧಿ**'
ಗಿರಿದುರ್ಗಮಲ್ಲ ಚಲದಂಕ
ರಾಯಕಳಚುರಿಕುಳಕ ಮಳಮಾರ್ತಾಂಡಪ್ರತಾಪ
ಲಂಕೇಶ್ವರ ರಾಮಮು
ರಾರಿ ಭುಜಬಳಮಲ್ಲ ಸೋವಿದೇವರಸರು........"[11]

ಈ ಶಾಸನಗಳನ್ನು ಗಮನಿಸಿದಾಗ ಶನಿವಾರಸಿದ್ಧಿ ಬಿರುದು ಕಲಚುರಿ ರಾಜರಲ್ಲಿ ವಂಶಪಾರಂಪರ್ಯವಾಗಿ ಬಂದಂತೆ ಕಾಣುತ್ತದೆ. ಬಹುಶಃ ಶಿಲಹಾರರಿಗಿದ್ದ ಬಿರುದನ್ನು ಚಾಲುಕ್ಯದೊರೆ ಆರನೇ ವಿಕ್ರಮಾದಿತ್ಯನು ತಮ್ಮ ಚಾಲುಕ್ಯ ಚಕ್ರಾಧಿಪತ್ಯಕ್ಕೆ ಸುಭದ್ರಕೋಟೆ ಎನಿಸಿದ್ದ ಪೆರ್ಮಾಡಿಗೆ ಅನ್ವಯಿಸಿ ಹೇಳಿರಬೇಕು. ಅವನ ಬಗೆ ಗಿರುವ ಶಾಸನದಲ್ಲಿ ಬಂದಿರುವ "ಚಾಲುಕ್ಯರಾಜ್ಯಾಭಿವೃದ್ಧಿ" ಎಂಬ ಮಾತು ಈ ವಿಷಯಕ್ಕೆ ಪುಷ್ಟಿಕೊಡುತ್ತದೆ. ಆದರೆ ಪೆರ್ಮಾಡಿ ಶನಿವಾರ ವಿಜಯ ಸಾಧಿಸಿದ ಬಗ್ಗೆ ಸ್ಪಷ್ಟವಾದ ಆಧಾರಗಳು ಈವರೆಗೆ ದೊರೆತಿಲ್ಲ. ತಂದೆಗೆ ಬಂದಿದ್ದ ಬಿರುದನ್ನು ಬಿಜ್ಜಳ ಹಾಗೂ ಅವನ ಮಗ ಪಟ್ಟಾಧಿಕಾರದ ಜೊತೆಗೆ ತಳೆದಿರಬಹುದು.

ಈ ಬಿರುದು ಹೊಯ್ಸಳ ರಾಜರಲ್ಲಿಯೂ ಕಂಡು ಬರುತ್ತದೆ. ಬಹುಶಃ ಕಲಚುರಿಗಳಾದಮೇಲೆ ಪ್ರಾಬಲ್ಯಕ್ಕೆ ಬಂದ ಹೊಯ್ಸಳರು ಈ ಬಿರುದನ್ನು ತಾವು ಗ್ರಹಿಸಿರಬೇಕು.

11. Ep. Car. XII : ದಾವಣಗೆರೆ ಶಾಸನ :
ನಂ. 84, ಪುಟ 156, ಕ್ರಿ.ಶ. 1161.

### ಶನಿವಾರಸಿದ್ಧಿ ಇರುವ ಹೊಯ್ಸಳ ರಾಜರುಗಳ ಶಾಸನಗಳು–ವೀರಸೋಮೇಶ್ವರ

೧) " ಸ್ವಸ್ತಿಶ್ರೀ ಸಮಾಭವನಾಸ್ರಯಂ ಪ್ರುಥ್ವೀವಲಾಭ ಮಾಹಾರಾಜಾಧಿರಾಜ .... ಪರಮೇಶ್ವರ ದ್ವಾರಾವತೀ ಪುರವರಾಧೀಶ್ವರಾ ಆದವಕುಲಾಥರಸಿಕಾ .... ಮಣಿ ಸರ್ವಜ್ಞ ಚೂಡಾಮಣಿ ಮಲೆರಾಜ ರಾಜಮಲ ಪರೇಳ್ಗಂಡ....ಗಂಡಭೇರುಂಡ ಕದನಪ್ರುಚಂಡ ಸಹಾಯ ಸೂರ ಏಕಾಂಗವೀರ "**ಶನಿವಾರಸಿದ್ಧಿ**" ಗಿರಿದುರ್ಗ ಮಲ್ಲ ಚಲದಂಕರಾಮ .... ಹೊಸಣ ಶ್ರೀ ವೀರಸೋಮೇಶ್ವರದೇವರಸರು...."

a) Ep. Car. XII

| | | | |
|---|---|---|---|
| ಪುಟ | 126, | ನಂ. 13, | ಕ್ರಿ.ಶ. 1251 |
| ,, | 128, | ನಂ. 21, | ಕ್ರಿ.ಶ. 1237 |
| ,, | 129, | ನಂ. 23, | ........ |
| ,, | 160, | ನಂ. 78, | ........ |

### ಹೊಯಿಸಳ ವೀರನಾರಸಿಂಹ ದೇವರು

೧) "ಸ್ವಸ್ತಿ ಸಮುಸ್ತಭುವನಾಶ್ರಯಂ ಶ್ರೀ ಪೃಥ್ವೀವಲ್ಲಭಂ ಮಹಾರಾಜಾಧಿರಾಜಂ ........ ತೀಪುರವರಾಧೀಶ್ವರಂ ಯಾದವ ಕುಳಾಂಬರದ್ಯುಮಣಿ ಸರ್ವಜ್ಞ ಚೂಡಾಮಣಿ ಮಲೆರಾಜರಾಜ ಮಲಪರೊಳುಗಂಡ ಗಂಡ ಬೇರುಂಡ ಕದನ ಪ್ರಚಂಡ ನೇಕಾಂಗವೀರನ ಸಹಾಯಸೂರ '**ಶನಿವಾರಸಿದ್ಧಿ**' ಗಿರಿದುರ್ಗ ಮಲ್ಲ ಚಲದಂಕರಾಮ ವೈರೀಭಕಂಠೀರವ ಮಗರರಾಜ್ಯ ನಿಸ್ಸಂಕ ಪ್ರತಾಪ ಚಕ್ರವರ್ತಿ ಹೊಯಿಸಳ ಶ್ರೀ ವೀರನಾರಸಿಂಹದೇವರು........||"

b) Ep. Car. XII

| | | | | | | |
|---|---|---|---|---|---|---|
| 1) | ಪುಟ | 129, | ನಂ. | 22, | ಕ್ರಿ.ಶ. | 1265 |
| 2) | ,, | 131, | ,, | 28, | ,, | 1259 |
| 3) | ,, | 49, | ,, | 49, | ,, | 1269 |

b) Ep. Car. XII

4) ಪುಟ 60, ನಂ. 11, ಕ್ರಿ.ಶ. 1226
5) ,, 77, ,, 45, ,, 1233
6) ,, 117, ,, 2, ,, 1263
7) ,, 148, ,, 54, ,, 1228
8) ,, 155, ,, 64, ,, 1260
9) ,, 225, ,, 27, ,, 1232

### ಹೊಯಿಸಳ ವೀರಬಲ್ಲಾಳದೇವರು

"ಸ್ವಸ್ತಿಶ್ರೀ ಮನುಮಹಾಮಂಡಳೇಶ್ವರಂ ಮಲೆರಾಜರಾಜ ಮಲಪರೊಳುಗಂಡ ಯಾದವನಾರಾಯಣ ದ್ವಾರಾವತೀ ಪುರವರಾಧೀಸ್ವರಂ ನಪೊರ್ಬ್ಬದಕರ್ಪ್ಪ ಮಂಡಳಿಕ ಘಟ ಸರ್ಪ ಚೋಳಮಾಳವ ಗೊರ್ಜ್ಜರಭಯಜ್ವರ ಚೋಳ ಕಟಕ....ಸೂಳಿಕಾರ ಅಯನನ ಬೆಂಕೊಂಡಗಂಡ ಚೆಂಗಿಯ ಬೆಂಕೊಂಡ ನಿರುಂಗೊಳನ ಬೆಂಕೊಂ(ಡ)ಗಂಡ ಪಾಂಡ್ಯ ಬೆಂಕೊಂಡ ಗಂಡ ಮುಸಣೆಯ ಬೆಂಕೊಂಡ ಗಂಡ ತೈಲಪನ ತಲೆಯ ಕೊಂಡ ಗಂಡನೆ....ಗಂಡ ಕದನ ಪ್ರಚಂಡ ತಳ ಕಾಡು ಗಂಗವಾಡಿ ನೊಣಂಬವಾಡಿ ಬನವಸೆ ಹಾ ನುಂಗಲು ಗೊಂಡ ಭುಜಬಳವೀರಗಂಗನ ಸಹಾಯ ಸೂರ '**ಸನಿ ವಾರಸಿದ್ಧಿ**' ಗಿರಿದುರ್ಗಮಲ್ಲ ಚಲದಂಕರಾಮ....ಹೊಯಿ ಸಳ ವೀರಬಲ್ಲಾ'ದೇವರಸರು...."

c) Ep. Car. XII

1) ಪುಟ 133, ನಂ. 31, ಕ್ರಿ.ಶ. 1193
2) ,, 183, ,, 123, ,, 1286
3) ,, 143, ,, 43, ,, 1205
4) ,, 143, ,, 29, ,, ....
5) ,, 185, ,, 127, ,, ....
6) ,, 198, ,, 4, ,, 1318
7) ,, 201, ,, 9, ,, 1187
8) ,, 214, ,, 17, ,, 1215
9) ,, 217, ,, 20, ,, 1188

### ವಿಷ್ಣುವರ್ಧನ ಬಿಟ್ಟಿದೇವ

"ಗಿರಿದುರ್ಗಮಲ್ಲ '**ಸನಿವಾರಸಿದ್ಧಿ**' ಅಸಹಾಯಶೌರ್ಯ್ಯ ಶ್ರೀಮನ್ಮಹಾ ಮಂಡಳೇಸ್ವರ ತ್ರಿಭುವನಮಲ್ಲ ಅರಿಭೂ ಪಾಲಹೃದಯ ಸೆಲಬಪ್ಪನಂಕ ಕಾರ ಚಲದಂಕರಾಮ .... ವಿಷ್ಣುವರ್ಧನ ಬಿಟ್ಟಿದೇವ...."

(Ep. Car. XII, ಪುಟ 166, ನಂ. 91 ಕ್ರಿ.ಶ. 1169)

### ಹೊಯ್ಸಳ ಬಲ್ಲಾಳ

"ಸ್ವಸ್ತಿ ಸಮಧಿಗತ ಪಂಚಮಹಾಸಬ್ದ ಮಹಾಮಂಡಳೇ ಸ್ವರ ದ್ವಾರಾವತೀ ಪುರವರಾಧೀಸ್ವರಂ ಯಾದವ ಕುಳಾಂ ಬರ ದ್ಯುಮಣಿಸಂವ್ಯಕ್ತ ಚೂಡಾಮಣಿ ಮಲಪರೊಳು ಗಂಡ ತಳಕಾಡು ಕೊಂಗು ನಂಗಲಿ ಗಂಗವಾಡಿ ನೊಣಂಬ ವಾಡಿ ಬನವಸೆ ಹಾನುಂಗಲು ಚಂಗಿಗೊಂಡ ಭುಜಬಳ ವೀರಗಂಗನಸಹಾಯ ಸೌರ್ಯ್ಯ '**ಸನಿವಾರಸಿದ್ಧಿ**' ಗಿರಿದುರ್ಗಮಲ್ಲ ನಿಸ್ಸಂಕಪ್ರತಾಪ ಹೊಯ್ಸಳ ಬಲ್ಲಾಳ ದೇವರು...."

(Ep. Car. XII, ಪುಟ 210, ನಂ. 14, ಕ್ರಿ.ಶ. 1187)

ಹೀಗೆ '**ಶನಿವಾರಸಿದ್ಧಿ**' ಬಿರುದು ವಂಶಪಾರಂಪರ್ಯ ವಾಗಿ ಅಥವಾ ಬಿರುದು ತಳೆದ ರಾಜನ ಮೇಲೆ ವಿಜಯ ಸಾಧಿಸಿದಾಗ ತಮ್ಮ ಹೆಸರಿನ ಹಿಂದೆ ಸೇರಿಕೊಂಡ ಬಿರುದು ಎಂದು ಭಾವಿಸಬಹುದು. ಅಲ್ಲದೆ ಇಲ್ಲಿ ಬಂದಿರುವ ಶಾಸನ ಗಳನ್ನೂ ಗಮನಿಸಿದಾಗ 'ಶನಿವಾರಸಿದ್ಧಿ ಗಿರಿದುರ್ಗಮಲ್ಲಂ' ಎಂದು ಎಲ್ಲಾ ಶಾಸನಗಳಲ್ಲಿಯೂ ಸರ್ವೇಸಾಮಾನ್ಯವಾಗಿ ಬಂದಿರುವುದರಿಂದ 'ಶನಿವಾರಸಿದ್ಧಿ' ಎಂಬ ಊರು ಇದ್ದಿರ ಬಹುದು ಎಂಬ ಅನುಮಾನವೂ ಉಂಟಾಗುತ್ತದೆ. ಆದರೆ ಈ ವಿಷಯದಲ್ಲಿ ಇದೇ ಸರಿ ಎಂದು ಹೇಳಲು ಸಾಧ್ಯವಾಗಿಲ್ಲ. ಈ ದಿಶೆಯಲ್ಲಿ ಇನ್ನೂ ಕಾರ್ಯವಾಗಬೇಕಾಗಿದೆ.

---

ಸೂ :- ಕರ್ಣಾಟಕ ಭಾರತಿ-ಸಂಪುಟ : ೨ ಸಂಚಿಕೆ : ೨.
[ಪುನರ್ಮುದ್ರಣ].



# ಗುರು ಕೊಡುಮತಿಯು

—ಎನ್. ಚನ್ನಬಸಪ್ಪ.

ಚಂದ್ರಕಾವಿಯನುಟ್ಟು । ಅಂದ ದಾವಿಗೆ ಮೆಟ್ಟು । ಸಿದ್ಧಗಂಗೆಯೊಳಗೆ ದಾಸೋಹ ॥
ಸಿದ್ಧಗಂಗೇಯೊಳಗೆ ದಾಸೋಹ ನೀಡುವ । ಶ್ರೀ ಶಿವಕುಮಾರ ಗುರು ಕೊಡುಮತಿಯ ॥ಪ॥

ಅನ್ನ ದಾಸೋಹವು । ಜ್ಞಾನ ದಾಸೋಹವು । ಇಲ್ಲಿರೆ ಸಿದ್ಧದೆ ತಡಿಯಲ್ಲಿ ॥
ಇಲ್ಲಿದೆ ಸಿದ್ಧರ ತಡಿಯಲ್ಲಿ ಅಡವೀಶನ । ಪೂರ್ಣಾನುಗ್ರಹದಿ ಕೊಡು ಮತಿಯ ॥೧॥

ಅರಿದರೆ ಶರಣ । ಮರೆದರೆ ಮಾನವ । ಎಂಬ ಇರವ ಇಳೆಗೆ ತಾ ತೋರುತ್ತ ॥
ಎಂಬ ಇರವ ಇಳೆಗೆ ತಾ ತೋರುತ್ತ ಮೆರೆವಂಥ । ಪರಮ ಜ್ಯೋತಿಯೇ ನೀ ಕೊಡು ಮತಿಯ ॥೨॥

ತ್ಯಾಗ ಭಕ್ತಿ ಜ್ಞಾನ । ದಾಸೋಹಂ ಭಾವಗಳ ಹೆಸಪ್ಪಿತ್ತ ತಂದೆ ನೀವಾಗಿರಲು ॥
ಹೆಸಪ್ಪಿತ್ತ ತಂದೆ ನೀವಾಗಿರಲು ಅನುದಿನ । ಅವನೆಲ್ಲ ನೀವಿತ್ತು ಕೊಡು ಮತಿಯ ॥೩॥

ಸುರತರು ನೀವಲ್ತೆ । ಗುರುತರು ನೀವಲ್ತೆ । ಶ್ರೀ ಉದ್ದಾನ ಶಿವಯೋಗಿ ಶಿಷ್ಯರಲ್ತೆ ॥
ಶ್ರೀ ಉದ್ದಾನ ಶಿವಯೋಗಿ ಶಿಷ್ಯರಲ್ತೆ ನೀವು । ಅಧ್ಯಾತ್ಮ ಜ್ಯೋತಿಯೆ ಕೊಡು ಮತಿಯ ॥೪॥

ಸಿದ್ಧಗಂಗಾಶ್ರಮವು । ಸಿದ್ಧಿಗಳಿಗಾಗರವು । ಅಮರವಾಣೀಯ ನಿಲಯಾವು ॥
ಅಮರ ವಾಣೀಯ ನಿಲಯಾದ ಅಧಿಪತಿಯೆ । ಸುಮತಿಯ ನೀ ಐತ್ತು ಹರಸಿರಯ್ಯ ॥೫॥

# ಕ್ಷೇತ್ರದ ಮಹಿಮೆ

ಕ್ಷೇತ್ರದ ಮಹಿಮೆಯ ಪೇಳುವೆನಣ್ಣ ಕೇಳಿರಿ ನೀವೆಲ್ಲ । ಅತಿಶಯದಿಂದಲಿ ಸಿದ್ಧಲಿಂಗೇಶನ ।
ಕರುಣೆಯು ನಿಮಗೆಲ್ಲ ॥ಇರಲಿ॥ ಸುಜನರೆ ತಮಗೆಲ್ಲ ॥ಪ॥

ಹಗಲೂ ಇರುಳೂ ನಡೆಯುವುದಣ್ಣ ಈಶನ ಕೃಪೆಯಿಂದ । ದಾಸೋಹವು ತಾ ಅನ್ನದಿ ಜ್ಞಾನದಿ ।
ಅತಿ ಚತುರತೆಯಿಂದ ॥ಕ್ಷೇತ್ರದಿ॥ ಅತಿವಿತರಣೆಯಿಂದ ॥೧॥

ವರ್ಷವರ್ಷಕೂ ಜಾತ್ರೆಯು ಚೆಂದ ಜನಗಳ ಆನಂದ । ಪರಿಪರಿಯಲಿ ತಾ ನಡೆಯುವುದಣ್ಣ ।
ಉತ್ಸವ ದಾನಂದ । ॥ಇಲ್ಲಿದೆ॥ ಭಕ್ತಿಯದಾನಂದ ॥೨॥

ಭಕ್ತಿ, ಜ್ಞಾನ, ವೈರಾಗ್ಯವ ಪುಟ್ಟಿಸಿ ಜನತೆಯ ಮನಕೆಲ್ಲ । ಸತತವು ದುಡಿಯುವ ಆಳಾಗಿರಿ ನೀವ್ ।
ಎಂಬುದ ಜನಕೆಲ್ಲ ॥ನೀತಿಯ॥ ನಿಲ್ಲದೆ ನಡೆಯೆಲ್ಲ ॥೩॥

ಕ್ಷೇತ್ರದ ಮಹಿಮೆಯು ಏರುತಲಿರಲು । ಶ್ರೀ ಶಿವಕುಮಾರ ಗುರುವರ್ಯ ।
ಈಶ್ವರಾನುಗ್ರಹ ಬೀರುತಲಿರುವರು । ಅನುದಿನ ನಮಗೆಲ್ಲ ॥ಸಂತತ॥ ಕರುಣಾಮಹಿಗೆಲ್ಲ ॥೪॥

# ಕುಮಾರವ್ಯಾಸ ಚಿತ್ರಿಸಿರುವ ದುರ್ಯೋಧನನ ಮುಖಭಂಗದ ಮೂರು ಪ್ರಸಂಗಗಳು

— ಡಿ. ಕೆ. ರಾಜೇಂದ್ರ.
ಕನ್ನಡ ಅಧ್ಯಯನ ಸಂಸ್ಥೆ ಮಾನಸಗಂಗೋತ್ರಿ, ಮೈಸೂರು.

ಕನ್ನಡದ ಮಹಾಕವಿಗಳ ವಿರಳ ಪಂಕ್ತಿಯಲ್ಲಿ ಕುಮಾರ ವ್ಯಾಸನಿಗೂ ಒಂದು ಮಹತ್ವದ ಸ್ಥಾನವಿದೆ. ಅವನು ಸೃಷ್ಟಿಸಿರುವ ಪಾತ್ರಗಳ ಜೀವಂತತೆಯಿಂದಾಗಿ, ವಿಶ್ವದ ಮಹಾಕವಿಗಳ ವಿರಳ ಪಂಕ್ತಿಯಲ್ಲಿಯೂ ಒಂದು ಸ್ಥಾನವನ್ನು ಗಿಟ್ಟಿಸಿಕೊಂಡಿದ್ದಾನೆ ಎನ್ನಬಹುದು. ಕುಮಾರವ್ಯಾಸ ಭಾರತ ಬೃಹತ್ತು, ಮಹತ್ತುಗಳ ದೃಷ್ಟಿಯಿಂದ ಒಂದು ಗಡತ್ತಾದ ಗ್ರಂಥ. ಕುಮಾರವ್ಯಾಸ ಚಿತ್ರಿಸಿರುವ ಪಾತ್ರಗಳು ನೈಜತೆಯನ್ನು ಪಡೆದುಕೊಂಡಿರುವಂತೆಯೇ, ಅವನು ಸೃಷ್ಟಿಸಿರುವ ಒಂದೊಂದು ಘಟನೆಯೂ ಅವನನ್ನು ಮಹಾಕವಿಯ ಪಟ್ಟಕ್ಕೇರಿಸಿದೆ. ಇಲ್ಲಿಯ ಒಂದೊಂದು ಘಟನೆಯೂ ಮುಂದಿನ ಮಹಾಘಟನೆಗೆ ನಾಂದಿಯಾಗುತ್ತದೆ. ಇಲ್ಲಿ ಯಾವುದೂ ಪ್ರತ್ಯೇಕವಲ್ಲ, ಅನಾವಶ್ಯಕವಲ್ಲ. 'ನಗೆಗೆ ನಗೆ ಕುಂಟಣಿ' ಆದ ಹಾಗೆ ಒಂದೊಂದು ಘಟನೆಯೂ ಮುಂದಿನ ಘಟನೆಗಳಿಗೆ ಪೂರಕವಾಗಿ ಬಂದಿವೆ, ಪೋಷಕವಾಗಿ ಬಂದಿವೆ. ಈ ದೃಷ್ಟಿಯಿಂದ ದುರ್ಯೋಧನನಿಗೆ ಆಗುವ ಮುಖಭಂಗದ ಪ್ರಸಂಗಗಳನ್ನು ಗಮನಿಸುವುದೇ ಈ ಲೇಖನದ ಪ್ರಮುಖ ಉದ್ದೇಶ.

ದುರ್ಯೋಧನ ಅಭಿಮಾನಧನ, ಛಲದಂಕಮಲ್ಲ. ಛಲದಲ್ಲಿಯೇ ಹುಟ್ಟಿ, ಛಲದಲ್ಲಿಯೇ ಬೆಳೆದು, ಛಲದಲ್ಲಿಯೇ ತನ್ನ ಅಂತ್ಯವನ್ನು ಕಾಣುತ್ತಾನೆ. ಎಲ್ಲಿಯೂ ತನ್ನ ಆತ್ಮಾಘಾತಕ್ಕೆ ಅವಕಾಶವಾಗುವಂತೆ ನಡೆದುಕೊಂಡವನಲ್ಲ. ವಿಧಿ ತಾನಾಗಿಯೇ ನಿಂತು ಅದನ್ನು ಮುರಿಯಲೆತ್ನಿಸಿದಾಗ, ಅದಕ್ಕೆ ತಕ್ಕ ಪ್ರತೀಕಾರವನ್ನು ಕೈಗೊಳ್ಳುತ್ತಾನೆ. ವಿಫಲನಾದಾಗ ಆತ್ಮಹತ್ಯೆಗೂ ಕೈ ಹಾಕಿದುದುಂಟು.

ದುರ್ಯೋಧನನ ಈ ಹಠಮಾರಿತನಕ್ಕೆ ಅವನೇ ಪೂರ್ಣ ಹೊಣೆಯಲ್ಲ, ತಂದೆ-ತಾಯಿಗಳೂ ಕಾರಣ. ಅವರೇ ನೀರೆರೆದು ಅದನ್ನು ಪೋಷಿಸಿದರು. ಈ ಕಾರಣದಿಂದಲೇ ಅವನು ಮೊದಲಿನಿಂದಲೂ ಹಠಮಾರಿಯಾಗಿ, ಹಿರಿಯರ ಮಾತನ್ನು ಅಲ್ಲಗಳೆಯುತ್ತಾ ಉದ್ಧಟನಾಗಿ ಬೆಳೆದ. ಇದರ ಜೊತೆಗೆ ಸೋದರಮಾವ ಶಕುನಿಯ ಉಪದೇಶ ಬೇರೆ ದೊರೆಯಿತು. ಮೊದಲಿನಿಂದಲೂ ಪಾಂಡವರ ಏಳಿಗೆಯನ್ನು ಕಂಡು ಕರುಬುತ್ತಿದ್ದ ಅವನಿಗೆ, ರಾಜಸೂಯ ಯಾಗದ ವೈಭವ ಅವನ ಕಣ್ಣನ್ನು ಇರಿಯಿತು. ಈ ಒಂದು ಘಟನೆ ಮುಂದಿನ ಎಲ್ಲಾ ದುರ್ಘಟನೆಗಳಿಗೂ ನಾಂದಿಯಾಯಿತು ಎನ್ನಬಹುದು. ಪಾಂಡವರ ವಿಷಯದಲ್ಲಿ ದುರ್ಯೋಧನನಿಗಿದ್ದ ಹೊಟ್ಟೆಯುರಿ ತಣ್ಣಗಾದದ್ದು ಅವನು ತಣ್ಣಗಾದಾಗಲೇ.

### ೧. ರಾಜಸೂಯ ಯಾಗ ಪ್ರಸಂಗ:

ಮಹಾಭಾರತದ ಮಹಾಯುದ್ಧಕ್ಕಾದಿಯಾಯ್ತು. ಈ ರಾಜಸೂಯ ಯಾಗ. ಮುಂದಿನ ಎಲ್ಲಾ ವೀರ ಪ್ರತಿಜ್ಞೆಗಳಿಗೂ, ಇಲ್ಲಿ ಸಂಭವಿಸುವ ಘಟನೆಗಳೇ ಕಾರಣವೆನ್ನಬಹುದು.

ಧರ್ಮರಾಯನ ಕರೆಗೆ 'ಓ'ಗೊಟ್ಟು ದುರ್ಯೋಧನ ರಾಜಸೂಯ ಯಾಗಕ್ಕೆ ದಯಮಾಡಿಸಿರುತ್ತಾನೆ. ಅಲ್ಲಿಯ ವೈಭವವನ್ನು ಕಂಡು ಕರುಬಿದ್ದರೂ ಅದನ್ನು ಹೊರಗೆಡಹಿರುವುದಿಲ್ಲ. ಅಗ್ರಪೂಜೆಯ ವಿಷಯದಲ್ಲಿಯೂ ಅವನು ಮೌನಿಯಾಗಿಯೇ ಇರುತ್ತಾನೆ. ರಾಜಸೂಯ ಯಾಗಕ್ಕೆ ಬಂದಿದ್ದ ಎಲ್ಲಾ ರಾಜರುಗಳೂ ಹಿಂತಿರುಗಿದ ಮೇಲೆ ಸಂಬಂಧಿ ಎನಿಸಿದ್ದ ಕೌರವ ಮಾತ್ರ ಅಲ್ಲಿಯೇ ಉಳಿದಿದ್ದು, ಮಯನಿರ್ಮಿತ

ಸೌಧವನ್ನು ನೋಡಲು ಹೋಗುತ್ತಾನೆ. ಅಲ್ಲಿಯ ವಿಚಿತ್ರಗಳು ಅವನನ್ನು ಬೆಗಡುಗೊಳಿಸಿ, ಅವಮಾನಕ್ಕೀಡಾಡುತ್ತವೆ. 'ಅಭಿಮಾನಧನ' ನೆನಿಸಿದ್ದ ದುರ್ಯೋಧನನ ಬಿಂಕ ಒಮ್ಮೆಗೆ ಕರಗಿ ನೀರಾಗಿ ಹರಿಯುತ್ತದೆ. ಪಾಂಡವರ ಮೇಲಿನ ಛಲ ಬಲಿಯುತ್ತದೆ.

ಕುಮಾರವ್ಯಾಸ ಈ ಸಂದರ್ಭವನ್ನು ಔಚಿತ್ಯವರಿತು ತಂದಿದ್ದಾನೆ. ಅಲ್ಲಿ ಸಂಭವಿಸಿದ ಘಟನೆಗಳನ್ನು ಅಭಿಮಾನಧನನೆನಿಸಿದ ದುರ್ಯೋಧನ, ಅಳಲಿನಿಂದ ತಾನೇ ಹೇಳಿಕೊಳ್ಳುವುದರ ಮೂಲಕ ಸಂದರ್ಭವನ್ನು ಮತ್ತೂ ಪರಿಣಾಮಕಾರಿಯಾಗಿಸಿದ್ದಾನೆ. ದುರ್ಯೋಧನನಿಗೆ ಸಂಬಧಿಸಿದ ಈ ಘಟನೆಗಳನ್ನು ಗಮನಿಸಿದಾಗ, ಆಸ್ಥಾನದಲ್ಲಿ ಯಾರಿದ್ದರೂ, ದುರ್ಯೋಧನನು ಮುಂದೆ ಪಾಂಡವರಿಗೆ ಮಾಡಬೇಕೆಂದು ಮಾಡಿಕೊಂಡಿದ್ದ ಸಂಕಲ್ಪವನ್ನೇ ಮಾಡಿಕೊಳ್ಳುತ್ತಿದ್ದರು ಎನ್ನಿಸುತ್ತದೆ.

ಅಪಮಾನಕ್ಕೀಡಾದ ದುರ್ಯೋಧನ ನಡು ರಾತ್ರಿಯಲ್ಲಿ ನಗರ ಪ್ರವೇಶಮಾಡಿ ಅರಮನೆಯಲ್ಲಿ ಮೌನಿಯಾಗಿರುತ್ತಾನೆ. ಮರುದಿನದಿಂದ ಅವನ ಮುಖದರ್ಶನವೇ ದುರ್ಲಭವಾಗುತ್ತದೆ. ರಾಣೀವಾಸದವರಿಗೂ ಸಹ, ಅರಮನೆಯಲ್ಲಿ ದಿನನಿತ್ಯ ನಡೆಯುತ್ತಿದ್ದ ಮಂಗಳಕಾರ್ಯಗಳೆಲ್ಲಾ ಸ್ತಬ್ಧವಾಗುತ್ತದೆ. ಹೊರಗೆ ಬಾರದೇ ಇದ್ದ ರಾಜನ ಬಗ್ಗೆ ಜನನು ನಾನಾ ರೀತಿ ಮಾತನಾಡಿಕೊಳ್ಳತೊಡಗುತ್ತಾರೆ. ದುರ್ಯೋಧನನ ಈ ದುಗುಡದ ಮೂಲವನ್ನರಿಯಲು ಶಕುನಿ ಪ್ರಯತ್ನಿಸುತ್ತಾನೆ. "ಪಾಂಡವರ ಸಕಲೈಶ್ವರ್ಯವೂ ನಿನ್ನ ಕೈಗೂಡುವಂತೆ ಮಾಡುತ್ತೇನೆ" ಎಂಬ ಭ್ರಮೆಯನ್ನುಂಟುಮಾಡಿ, ಅದಕ್ಕೆ ತಕ್ಕ ಉಪಾಯವನ್ನು ಸೂಚಿಸಿ, ಧೃತರಾಷ್ಟ್ರನ ಬಳಿಗೆ ಕರೆತರುತ್ತಾನೆ.

ಶಕುನಿಯೊಡನೆ ಬಂದ ಮಗನನ್ನು "ದುಗುಡವೇಕೈ ಮಗನೆ" ಎಂದು ಪ್ರಶ್ನಿಸುತ್ತಾನೆ. ಮೊದಲೇ ರಚಿಸಿದ್ದ ನಾಟಕದಂತೆ ದುರ್ಯೋಧನ ನಡೆದ ಘಟನೆಗೆ ಮತ್ತಷ್ಟು ಬಣ್ಣ ಬಳಿದು ರಂಗುಗೊಳಿಸುತ್ತಾನೆ. "ಹೇಳಲೆಮ್ಮ ನೀವು ಧರ್ಮದ ಕೂಳಿಯಲಿ ಸಿಲುಕಿದವರು. ಎನ್ನನು ಕೂಳನೆಂಬಿರಿ" ಎಂದು ಒಂದು ಒಗ್ಗರಣೆಯ ಮಾತಿನೊಂದಿಗೆ ಆರಂಭಿಸುತ್ತಾನೆ. ತನ್ನ ಹಣೆಯಮೇಲಿದ್ದ ಬುಗುಟನ್ನೂ ತೋರಿಸುತ್ತಾ ತನ್ನ ದುಃಖವನ್ನು ಉಕ್ಕಿಸುತ್ತಾನೆ. ಪಾಂಡವರ ವೈಭವವನ್ನೂ ಅವರು ತನ್ನನ್ನು ಅವಮಾನಗೊಳಿಸಿದ ಬಗೆಯನ್ನೂ ಅತ್ಯಂತ ದುಃಖದ ಭಾರದಲ್ಲಿ ತೋಡಿಕೊಳ್ಳುತ್ತಾನೆ.

ಆ ಮಯ ನಿರ್ಮಿತ ಓಲಗದಲ್ಲಿ :—

"ಬೆಗಡು ಗೊಳಿಸಿದರೆನ್ನನವರೋ  
ಲಗದ ಸೂಳೆಯರವರ ಸೂಳಿನ  
ನಗೆಯ ನೆನೆ ನೆನೆದೆನ್ನ ಮನ ಜರ್ಝರಿತವಾಯ್ತೆಂದ."

ಅಲ್ಲಿ ನಿರ್ಮಿತವಾಗಿದ್ದ ಪ್ರತಿಯೊಂದು ತನ್ನನ್ನು ಅವಮಾನಪಡಿಸಲೆಂದೇ ಸಿದ್ಧಗೊಳಿಸಲಾಗಿತ್ತೆಂಬುದು ಧ್ವನಿಸುವಂತೆ ತನ್ನ ದುಃಖವನ್ನು ತೋಡಿಕೊಳ್ಳುತ್ತಾನೆ.

ಸ್ಥಳವೆ ಜಲರೂಪದಲಿ ಜಲವೇ  
ಸ್ಥಳದ ಪಾಡಿನಲ್ಲಿದ್ದುದು ಕೆಲ  
ಬಲದ ಭಿತ್ತಿಯ ಕಂಬ ಕಂಬದ ನಡುವೆ ಭಿತ್ತಿಗಳು  
ಹೊಳಹನೇ ಕಂಡೆನು ವಿವೇಕದ  
ಕಳಿವು ಚಿತ್ತದ ಸೆರೆದುಹಾರದೊ  
ಳಿಳಿದ ಪಕ್ಷಿಗಳೆಂತು ಸೋತೆನು ತಂದೆ ಕೇಳೆಂದ.  
ಮುಂದೆ ವಿಮಲ ಸ್ಫಟಿಕ ಭೂಮಿಯ  
ದೊಂದುಹಾವಿನೊಳೀಕ್ಷಿಸುತ ಕೊಳ  
ನೆಂದು ಬಗೆದೆನು ಕಂಡು ನಿಂದು ಸಂವರಿಸಿದೆನು ಮುಂಜೆರಗ  
ಅಂದು ದ್ರೌಪದೀ ಸಹಿತ ನಾರೀ  
ವೃಂದ ಕೈಗಳ ಹೊಯ್ದು ಮಿಗೆ ಗೊ  
ಳ್ಳೆಂದು ನಕ್ಕುದು ನೊಂದು ತಲೆವಾಗಿದೆನು ಲಜ್ಜೆಯಲಿ.

ಮುಂದೆ ನಿಜವಾದ ಸರೋವರ ಕಂಡಾಗ ಅದು ಸ್ಫಟಿಕವೆಂದೇ ಭಾವಿಸಿ ಕಾಲನ್ನಿಟ್ಟಾಗ "ನೀರಾಯ್ತು ನೆನೆದೆನು ನಾಭಿ ದಘ್ನದಲಿ"—

ಮತ್ತೆ ಗೊಳ್ಳೆಂದುದು ನೃಪಾಲನ  
ಮತ್ತ ಕಾಶಿನಿಯರು ಯುಧಿಷ್ಠಿರ  
ನಿತ್ಯ ದಿವ್ಯ ದುಕೂಲವನು ತರಿಗಡರಿ ತೊಡಚಿದೆನು  
ಬತ್ತಿತೆನ್ನಭಿಮಾನ ಜಲನಿಧಿ  
ಮತ್ತೆ ಮಾರಿಯ ಮುಸಕವನು ನೀ  
ಪ್ರಿತ್ರವಿಸಿರೇ ಬೊಪ್ಪಯೆಂದನು ಕೌರವರಾಯ

ತನ್ನ ದುರವಸ್ಥೆಯನ್ನು ಕಂಡು ಪಾರ್ಥ ಭೀಮಾದಿಗಳು ನಕ್ಕದ್ದಕ್ಕಿಂತ, ಸಖೀ ಜನರೊಡನಿದ್ದ ದ್ರೌಪದಿ ನಕ್ಕದ್ದು ಅವನಿಗೆ ಹೆಚ್ಚು ಅಸಹನೀಯವೆನಿಸಿದೆ. ಗಂಡಿಗೆ ಗಂಡಿನಿಂದಾದ ಅವಮಾನಕ್ಕಿಂತ, ಹೆಣ್ಣಿನ ಮುಂದೆ ಆದ ಅವಮಾನ ಹೆಚ್ಚು ಪರಿಣಾಮಕಾರಿ ಎನ್ನಿಸುತ್ತದೆ! ಅದರಲ್ಲಿಯೂ ಪರಮ ಶತ್ರುವಿನ ಮುಂದೆ ಅಭಿಮಾನಧನನೆನಿಸಿದ ದುರ್ಯೋಧನನಿಗೆ ಆದ ಅವಮಾನ ನಿಜಕ್ಕೂ ಮರುಕ ಹುಟ್ಟಿಸುವಂತಹುದು. ಇದರಿಂದಾಗಿ ಈ ಪನ್ನಗಪತಾಕನ ಮನದಲ್ಲಿ ಸುಪ್ತವಾಗಿ ಅಡಗಿದ್ದ ಪ್ರತೀಕಾರದ ಅಗ್ನಿಜ್ವಾಲೆ ತಾಂಡವಾಡುತ್ತದೆ. ಮುಂದೆ ಪಾಂಡವರು ಜೂಜಿನಲ್ಲಿ ಸೋತ ಮರುಕ್ಷಣವೇ, ದುರ್ಯೋಧನನ ಕಣ್ಣು ದ್ರೌಪದಿಯ ಮಾನಾಪಹರಣದ ಕಡೆ ಹರಿದುದು ಇದರ ಪ್ರತಿಧ್ವನಿಯೇ ಆಗಿದೆ. ದ್ರೌಪದಿಯು ಅಂದು ನಕ್ಕನಗೆ ಅವನ ಮನದಲ್ಲಿ ಇನ್ನೂ ಮಸುಕಾಗಿರಲಿಲ್ಲ; ಘಂಟೆಯ ಧ್ವನಿಯಂತೆ ಅದು ಅನುರಣಿತವಾಗುತ್ತಲೇ ಇದ್ದಿರಬೇಕು:

ನಗೆಗೆ ನಗೆ ಕುಂಟಣಿ ವಿವೇಕದ
ಹೊಗೆಗೆ ಹೊಗೆ ಸಖಿಯಾದುದಲ್ಲಿಯ
ಹಗರಣಿಗ ನಾನಾದೆನು ನೋಟಕದ ಜನವಾಯ್ತು
ನಗುವವರ ಜರೆದನೆ ಯುದಿಷ್ಠಿರ
ನಗೆಯ ಮರೆದನೆ ಬೊಪ್ಪ ನಿಮ್ಮಯ
ಮಗನ ಅವಸ್ಥಾರೂಪವಿದು ಚಿತ್ತವಿಸಿ ನೀವೆಂದ

ದುರ್ಯೋಧನನ ಈ ಅವಸ್ಥಾರೂಪವನ್ನು ಕಂಡು, ದ್ರೌಪದಿ ಮೊದಲಾದ ಸಖಿ ಜನರು ನಗೆಗಡಲಿನಲ್ಲಿ ತೇಲುತ್ತಿದ್ದರೂ, ಹಿರಿಯನಾದ ಯುಧಿಷ್ಠಿರ ಆ ನಗೆಯನ್ನ ತಡೆಯುವ ಪ್ರಯತ್ನವನ್ನಾದರೂ ಮಾಡಲಿಲ್ಲವಲ್ಲ ಎಂಬ ಅಸಮಾಧಾನವೂ ಅವನಲ್ಲಿದೆ. ಯುದಿಷ್ಠಿರ ಆ ಸಮಯದಲ್ಲಿ ಒಂದು ಒಳ್ಳೆಯ ಮಾತನ್ನಾದರೂ ಆಡಿದ್ದರೆ ದರ್ಯೋಧನನಿಗೆ ಸ್ವಲ್ಪವಾದರೂ ಸಮಾಧಾನವಾಗುತ್ತಿತ್ತೋ ಏನೋ! ಪಾಂಡವರು ಜೂಜಿನಲ್ಲಿ ಸೋತ ಮೇಲೆ ಅವರನ್ನು ರಾಜ್ಯಭ್ರಷ್ಟರನ್ನಾಗಿ ಮಾಡುವುದಷ್ಟೇ ಅಲ್ಲದೆ ಮಾನಭಂಗ ಮಾಡುವುದರ ಮೂಲಕವೂ ತನ್ನ ಛಲವನ್ನು ಸಾಧಿಸಿಕೊಳ್ಳುವ ಪ್ರಯತ್ನ ಮಾಡುತ್ತಾನೆ. ದುರ್ಯೋಧನ ತನಗಾದ ಅವಮಾನದಲ್ಲಿ ಆತ್ಮಹತ್ಯೆಗೂ ಸಿದ್ಧನಿದ್ದ; ಆದರೆ ಅವನು ಬದುಕಿದ ಉದ್ದೇಶವೇ ಬೇರೆ. ಅವನು 'ರೋಷದ ಗೊಡ್ಡಾ'ಗಿ ಎಲ್ಲಾ ಅವಮಾನವನ್ನೂ ನುಂಗಿಕೊಂಡರೂ, ಅದನ್ನೆಲ್ಲಾ ಬಡ್ಡೀ ಸಹಿತ ಗಿಟ್ಟಿಸುವ ಪಣ ತೊಡುತ್ತಾನೆ—

ಒಡ್ಡವಿಸಿತೆನ್ನಾಟ ನಗೆಯೊಳ
ಗಡ್ಡ ಬಿದ್ದಳು ಪಾಂಡುಪುತ್ರರ
ಬೊಡ್ಡಿ ಬಿಂಕದಲವರು ಬಿರಿದರು ಭೀಮಫಲುಗುಣರು
ಖಡ್ಡಿಗರುವೆನ್ನಿಂದ ರೋಷದ
ಗೊಡ್ಡು ನಾನಾದೆನು ವಿಘಾತಿಯ
ಬಡ್ಡಿಗಿನ್ನಿಕ ಬದುಕಿದೆನು ಧೃತರಾಷ್ಟ್ರ ಕೇಳೆಂದ.

ಆ ಕ್ಷಣವೇ ದುರ್ಯೋಧನನು ತಾನು ಮುಂದೆ ಮಾಡಬೇಕಾದ ಕಾರ್ಯದ ಪಟ್ಟಿಯನ್ನು ಧೃತರಾಷ್ಟ್ರನ ಮುಂದಿಡುತ್ತಾನೆ. ತಾನೂ ಆ ಮಡುವಿನಲ್ಲಿ ತೇಲಿಹೋದರೂ ಚಿಂತೆಯಿಲ್ಲ, ಪಾಂಡವರನ್ನು ಮಾತ್ರ ನಿರ್ನಾಮಗೊಳಿಸಬೇಕೆಂಬುದು ಅವನ ಇಚ್ಛೆ.—

ಸಿಂಗಿಯನು ಬಿತ್ತಿದೆನು ಪಾಂಡವ
ರಂಗದಲಿ ತತ್ಫಲದ ಬೆಳಸಿನ
ಸಿಂಗಿಯಲಿ ತಾ ಸಾವೆನಲ್ಲದೊಡಗ್ನಿ ಕುಂಡದಲಿ
ಭಂಗಿಸುವೆನಾ ಫಲದೊಳೆನ್ನನು
ನುಂಗಬೇಹುದು ವಹ್ನಿ ಮೇಣೀ
ಗಂಗೆಯಲಿ ಬಿದ್ದೊಡಲ ನೀಗುವೆ ನೆನುತ ಬಿಸುಸುಯ್ದ

ಮುಂದೆ ದುರ್ಯೋಧನ, ಶಕುನಿಯ ಸಹಾಯದಿಂದ ಪಾಂಡವರನ್ನು ಜೂಜಿನಲ್ಲಿ ಗೆದ್ದು, ಅವರನ್ನು ರಾಜ್ಯಭ್ರಷ್ಟರನ್ನಾಗಿಸಿದ ಮೇಲೂ ಅವನ ಸೇಡಿನ ಕಿಡಿ ತಣ್ಣಗಾಗುವುದಿಲ್ಲ. ರಾಜಸೂಯ ಯಾಗದ ಸಂದರ್ಭದಲ್ಲಿ ಭೀಮಾರ್ಜುನರೇ ಮೊದಲಾಗಿ ದ್ರೌಪದೀವೃಂದ ನಕ್ಕನಗೆ ಅವನ ಸ್ಮೃತಿಯಿಂದ ಇನ್ನೂ ಮರೆಯಾಗಿಲ್ಲ. ಪಾಂಡವರ ಸರ್ವಸ್ವವೂ ತನ್ನದಾದ ಮೇಲೆ ಅವನ ಮೊದಲ ದೃಷ್ಟಿ ಹರಿಯುವುದು ದ್ರೌಪದಿಯ ಮಾನಭಂಗದತ್ತ. ದುರ್ಯೋಧನನು ದ್ರೌಪದಿಗೆ ಮಾಡಿದ ಈ ಬಗೆಯ ಅಮಾನುಷವಾದ ವರ್ತನೆ ಅಸಹನೀಯವಾದುದು. ನಿಜ, ಆದರೆ ದುರ್ಯೋಧನನಿಗೆ ಆಗ ಆಗಬೇಕಾದ್ದುದು ನ್ಯಾಯಾನ್ಯಾಯಗಳ ತೀರ್ಮಾನವಲ್ಲ;

ಮುಯ್ಯಿಗೆ ಮುಯ್ಯಿನ ಪ್ರಶ್ನೆ ತನ್ನ ಕೃತ್ಯದಿಂದ ಅವನಿಗೆ ತೃಪ್ತಿಯುಂಟಾದರೆ ಸಾಕಾಗಿದೆ ಅಷ್ಟೆ. ಆದರೆ, ದ್ರೌಪದಿಯಾದರೂ ಮಾಡಿದ್ದೇನು? ಪರಿಚಯವಿಲ್ಲದ ಸ್ಥಳದಲ್ಲಿ ಕಾಲುಜಾರಿ ಬಿದ್ದಾಗ ಅವನನ್ನು ನೋಡಿ – "ನಾರೀವೃಂದ ಕೈಗಳ ಹೋಯ್ದು – ಮಿಗೆ ಗೊಳ್ಳೆಂದು ನಕ್ಕುದು". ಕೌರವ ಒಂದು ದೇಶದ ರಾಜ, ಅಲ್ಲಿಗೆ ಅಥಿತಿ, ಜೊತೆಗೆ ಅವಳ ಮೈದುನ; ಇಷ್ಟಾದರೂ ಜವಾಬ್ದಾರಿಯುತಳಾದ ಮನೆಯ ಒಡತಿಯಾದ ಅವಳು ಗಹಗಹಿಸಿ ನಕ್ಕರೆ ಅಭಿಮಾನಧನನಾದ ದುರ್ಯೋಧನನಿಗೆ ಸೇಡಿನ ಮನೋಭಾವ ಬಾರದೇ ಇರುವುದಾದರೂ ಹೇಗೆ? ಈ ಒಂದು ಪ್ರಸಂಗ, ಆ ಸ್ಥಾನದಲ್ಲಿ ಆಗ ಯಾರಿದ್ದಿದ್ದರೂ ದುರ್ಯೋಧನ ಕೈಗೊಂಡಂತಹ ಪ್ರತೀಕಾರವನ್ನೇ ಕೈಗೊಳ್ಳುತ್ತಿದ್ದರೇನೋ ಎಂಬಷ್ಟು ಸಹಜವಾಗಿ ಬಂದಿದ್ದರೂ ತುಂಬಿದ ಸಭೆಯಲ್ಲಿ ಒಂದು ಹೆಣ್ಣಿನ ಮಾನಭಂಗ ಮಾಡಿದುದು! ಸರಿ; ಎಂದು ಯಾರು ಒಪ್ಪುವಂಥದಲ್ಲ. ಆದರೆ ದುರ್ಯೋಧನ ಅಂಥಾ ಒಂದು ಹೇಯ ಕೃತ್ಯಕ್ಕೆ ಪ್ರಸಕ್ತ ಪಟ್ಟಿಪಡುತ್ತಾನೆ ಇದರಿಂದಾಗಿ ಅನೇಕ ಶಾಪಕ್ಕೆ ಒಳಗಾಗುವುದಲ್ಲದೆ, ಅನೇಕ ಶಪಥಗಳಿಗೂ ಕಾರಣನಾಗುತ್ತಾನೆ.

ರಾಜಸೂಯ ಯಾಗದ ಸಂದರ್ಭದಲ್ಲಿ ನಡೆಯುವ ಈ ಒಂದು ಪ್ರಸಂಗ ಮುಂದಿನ ಎಲ್ಲಾ ಘೋರ ಘಟನೆಗಳಿಗೂ ನಾಂದಿಯಾಗುತ್ತದೆ. ದುರ್ಯೋಧನ ಈ ಸಂದರ್ಭದಲ್ಲಿ ಅಷ್ಟು ಅವಮಾನಿತನಾಗದಿದ್ದರೆ, ದ್ರೌಪದಿ ಮೊದಲಾದವರು ಅಷ್ಟು ಅಟ್ಟಹಾಸದಿಂದ ನಗದಿದ್ದಿದ್ದರೆ, ದ್ರೌಪದಿಯ ಸೀರೆಯನ್ನು ತುಂಬಿದ ಸಭೆಯಲ್ಲಿ ಸುಲಿಸುವಷ್ಟು, ಕೌರವ ಕ್ರೂರಿಯಾಗುತ್ತಿರಲಿಲ್ಲವೋ ಏನೋ! ಈ ವಸ್ತ್ರಾಪಹರಣ ಪ್ರಸಂಗ ಜರುಗಿದುದರಿಂದಲೇ, ಭೀಮ ದ್ರೌಪದಿಯರ ಪ್ರತಿಜ್ಞೆಗಳಿಗೆ ಕಾರಣವಾಯಿತು. ಈ ಪ್ರತಿಜ್ಞೆಗಳಿಂದಾಗಿ, ಅವುಗಳ ಪೂರೈಕೆಗಾಗೇ ಮುಂದೆ ಒಂದು ವಿಧದಲ್ಲಿ ಶಾಂತಿ[illegible]ತಿಯಿಂದಲೇ ಅಂತ್ಯವನ್ನು ಕಾಣಬಹುದಾಗಿದ್ದ ಮಹಾಭಾ[illegible]ನ ಕಥೆ ಕರಾಳರೂಪವನ್ನು ಪಡೆದುಕೊಂಡಿತು ಎನ್ನಬಹು[illegible]. ಯುದ್ಧ ಮಾಡಲು ಮನಸ್ಸಿಲ್ಲದಿದ್ದರೂ, ತಮ್ಮ ತಮ್ಮ ಪ್ರತಿಜ್ಞೆಗಳನ್ನು ಈಡೇರಿಸಿಕೊಳ್ಳುವುದಕ್ಕಾಗಿ ಯುದ್ಧವನ್ನೇ ಅನುಮೋದಿಸುತ್ತಾರೆ. ಇದರಿಂದಾಗಿ ಮುಂದಿನ ಮಹಾ ಸಂಗ್ರಾಮಕ್ಕೆ ಕಾರಣರಾಗುತ್ತಾರೆ.

## ೨. ಘೋಷಯಾತ್ರೆ ಪ್ರಸಂಗ

ದುರ್ಯೋಧನನಿಗಾಗುವ ಇಂತಹುದೇ ಇನ್ನೊಂದು ಮುಖಭಂಗವ ಪ್ರಸಂಗವೆಂದರೆ ''ಘೋಷಯಾತ್ರೆ''ಯ ಪ್ರಸಂಗ. ಇಲ್ಲಿ ದುರ್ಯೋಧನ ಅತ್ಯಂತ ಹೀನಾಯ ಸ್ಥಿತಿಗೆ ಒಳಗಾಗುತ್ತಾನೆ. ದುರ್ಯೋಧನನಲ್ಲಿ ತುಂಬಿ ತುಳುಕುತ್ತಿದ್ದ ದರ್ಪವನ್ನು ಕಡಿಮೆ ಮಾಡಲು ವಿಧಿಯೇ ಅನುಗೊಳಿಸಿದ ಒಂದು ಸಂಚು ಇದೆನ್ನ ಬಹುದು.

ರಾಜಸೂಯ ಯಾಗದ ಸಂದರ್ಭದಲ್ಲಿ ಅವಮಾನಿತನಾದ ಕೌರವನು ಪಾಂಡವರನ್ನು ರಾಜ್ಯಭ್ರಷ್ಟರನ್ನಾಗಿಸಿ ಕಾಡಿಗೆ ಅಟ್ಟುವುದರ ಮೂಲಕ, ದ್ರೌಪದಿಯನ್ನು ತುಂಬಿದ ಸಭೆಯಲ್ಲಿ ಅವಮಾನ ಗೊಳಿಸಿದುದರ ಮೂಲಕ, ನಷ್ಟವಾಗಿದ್ದ ಮಾನವನ್ನು 'ಬಡ್ಡಿಸಹಿತ' ಮತ್ತೆ ಪಡೆದಕೊಂಡು, ಅದರಿಂದ ಮತ್ತೆ ಕೊಬ್ಬಿ ಅದರ ಭಾರವನ್ನು ಬಳಸಿಕೊಳ್ಳಲೋಸುಗವೋ ಎಂಬಂತೆ 'ಘೋಷಯಾತ್ರೆ'ಯನ್ನೂ ಕೈಗೊಳ್ಳುತ್ತಾನೆ. ದುರ್ಯೋಧನ ಮನುಷ್ಯಹಂಕಾರದಿಂದ ಕೊಬ್ಬಿ, ಮದಾಂಧನಾದಾಗ, ಹಿತೈಷಿಗಳು ಅದನ್ನು ತಡೆಯುವಲ್ಲಿ ವಿಫಲರಾದಾಗ ವಿಧಿಯೇ ಮುಂದೆ ಬರಬೇಕಾಗುತ್ತದೆಂದು ತೋರುತ್ತದೆ. ಅಹಂಕಾರದ ಮಡುವಿನಲ್ಲಿ ಮುಳುಗಿದ್ದ ಕೌರವನನ್ನು ಮೇಲೆತ್ತಿ, ಅವನ ಅಹಂಭಾವದ ಹೊರೆಯ ಭಾರವನ್ನು ಇಳಿಸಲು ವಿಧಿಯೇ ಅನುವುಗೊಳಿಸಿದ ಸಂಚು ಈ 'ಘೋಷಯಾತ್ರೆ'.

ದುರ್ಯೋಧನನು ಈ 'ಘೋಷಯಾತ್ರೆ'ಯನ್ನು ಏರ್ಪಡಿಸಿದುದರ ಉದ್ದೇಶ ಸ್ಪಷ್ಟವಾಗಿಯೇ ಇದೆ—

ಈಗಳೀ ವಿಭವದ ವಿಲಾಸದ
ಭೋಗದಗ್ಗಳಿಕೆಗಳ ಭುಜದ
ಪ್ರಾಗಮ ವನವರಿದ್ದ ವನದಲಿ ತೋರಬೇಕೆಂದ।

ಪಾಂಡವರು ರಾಜ್ಯವನ್ನು ಕಳೆದುಕೊಂಡು ಕಾಡಿನಲ್ಲಿ ನಿರ್ಗತಿಕರಾಗಿ ಅಲೆಯುತ್ತಿದ್ದರೂ, ಕೌರವನಿಗೆ ತೃಪ್ತಿ

ಯಿಲ್ಲ. ಅವರ ಮುಂದೆ ತನ್ನ ವೈಭವವನ್ನು ಮೆರೆಯ ಬೇಕು. ತನ್ನ ಶಕ್ತಿಸಾಮರ್ಥ್ಯವನ್ನು ಪ್ರದರ್ಶಿಸ ಬೇಕೆಂಬ ಉದ್ದೇಶವುಳ್ಳವನಾಗಿ ಹೊರಡುತ್ತಾನೆ. ರಾಜಸೂಯಯಾಗದಲ್ಲಿ ಪಾಂಡವರ ವೈಭವವನ್ನು ಕಂಡ ಅವನಿಗೆ, ಅದರಿಂದ ಉಂಟಾದ ಕಿಚ್ಚು ಇನ್ನೂ ತಣ್ಣ ಗಾಗಿರುವುದಿಲ್ಲ. ತಾನೂ ಶ್ರೀಮಂತನಾಗಿ, ವೈಭವದಿಂದ ಕೂಡಿದ್ದರೂ ಪಾಂಡವರ ಸುವ್ಯವಸ್ಥಿತವಾದ ಶ್ರೀಮಂತಿಕೆ ಅವನನ್ನು ಬಡವನನ್ನಾಗಿ ಅನ್ನಿಸುತ್ತಿರುತ್ತದೆ. ಈಗ ಪಾಂಡವರು ಕಾಡಿನಲ್ಲಿ ದೇಸಿಗರಾಗಿ ಅಲೆದಾಡುವಾಗ ತನ್ನೆಲ್ಲಾ ವೈಭವವನ್ನು ಮೆರೆಯಬೇಕೆಂದು ಬಂದಿರು ತ್ತಾನೆ. ಆದರೆ ವಿಧಿಯೇ ಬೇರೊಂದೆಣಿಸಿರುತ್ತದೆ. ಮುಂದಾಗಬಹುದಾದ ಘಟನೆಗಳನ್ನು ಊಹಿಸಿಯೇ ಏನೋ ಧೃತರಾಷ್ಟ್ರನೇ ಮೊದಲಾದ ಭೀಷ್ಮ, ಗುರು, ಕೃಪರು ಎಷ್ಟೇ ಬೇಡಿಕೊಂಡರೂ ದುರ್ಯೋಧನ ಕಿವಿ ಗೊಡದೆ ಬಂದಿರುತ್ತಾನೆ ಅತ್ಯಂತ ವೈಭವಪೂರಿತವಾಗಿ, ಸಕಲ ಸಿದ್ಧತೆಗಳೊಡನೆ ತಪೋವನವನ್ನೇ ಅಲ್ಲೋಲ ಕಲ್ಲೋಲ ಮಾಡುವ ಮನೋಭಾವವನ್ನು ಹೊತ್ತು 'ಘೋ ೯ ಷ ಯಾ ತ್ರೆ' ಯನ್ನು ಕೈಗೊಳ್ಳುತ್ತಾನೆ — ದುರ್ಯೋಧನ :

ಯುವತಿ ಮಯವೋ ಸೃಷ್ಟಿ ಗಣಿಕಾ
ಯುವತಿಯರ ನೆಲನೀದುದೊದಿಗು
ವಿವರ ಕರೆದುದೊ ಕಾಂತೆಯರ ನೆನೆ ಕವಿದುದನಲದಲಿ।

ಈ ಕಾಂತೆಯರು ಅತ್ಯಂತ ಉನ್ನತವಾದ ಧ್ಯೇಯ ಗಳನ್ನು ಹೊಂದಿ ಇದರಲ್ಲಿ ಭಾಗವಹಿಸಿರುತ್ತಾರೆ! ತಮ್ಮ ಚಲುವಿನ ಬಲೆಯಲ್ಲಿ ಸಿಕ್ಕಿದ್ದುದೆಲ್ಲವನ್ನೂ ಸೂರೆಗೊಳ್ಳು ವುದು –'ಘೋಷಯಾತ್ರೆ'ಯ ಮಹೋದ್ದೇಶವಾಗಿತ್ತೆಂದು ಬೇರೆ ಹೇಳಬೇಕಾಗಿಲ್ಲ.

ಬಲು ಮೊಲೆಯ ನೊಂಕಿನಲಿ ಶಾಂತರ
ತಲೆಕೆಳಗ ಮಾಡುವೆನು ಕಡೆಗ
ಣ್ಣಲಗಿನಲಿ ಕೊಯ್ದೆತ್ತುವೆವು ವಿಜಿತೇಂದ್ರಿಯರ ಮನವ
ಎಳೆನಗೆಗಳಲಿ ವೇದ ಪಾಠಕರ
ಕಲಕಿ ಮಿಗೆ ವೇದಾಂತ ನಿಷ್ಠರ
ಹೊಳಸಿ ದುವ್ವಾಳಿಸುವೆವೆಮಗಿದಿರಾರು ಲೋಕದಲಿ

ಎಂಬ ದೃಢ ನಿರ್ಧಾರವನ್ನೂ ಹಾಗೂ ಮಹೋದ್ದೇಶ ಗಳನ್ನು ಹೊಂದಿ ಆ ಕಾಂತೆಯರು 'ಅಲ್ಲಿ ಕನಿಕರವ ಕುಣಿಸಿ, ಮಣಿಕುಂಡಳವ ನಲುಗಿಸಿ, ಹಣೆಯ ಮುತ್ತಿನ ತಿಲಕವನು ತನಿಗೆದರಿ ನಡೆದುದು ಕೂಡೆ ಸತಿನಿವಹ?' ಹೀಗೆ ಸರ್ವಾಭರಣಾಲಂಕೃತರಾದ ನಾರೀಮಣಿಯರೇ ಮೊದಲಾಗಿ—

.... .... .... .... ಹತ್ತುಸಾವಿರ
ಕರಿಘಟಾವಳಿಯೆಂಟು ಸಾವಿರ
ವರ ವರೂಥರು ರಾವುತರ ವಾಘೆಯಲಿ ಹಯಕೋಟಿ
ಬಿರುದಿನಗ್ಗರ ಭಟರ ಸಂಖ್ಯೆಯ
ನರಿಯೆನಿಂತು ಘೋಷಯಾತ್ರೆಯ
ಪರುಠವಣೆಗೊದಗಿದ ಚತುರ್ಬಲವನವನಿ ಪಾಲಕನ।

ಇಷ್ಟೆಲ್ಲಾ ವೈಭವದಿಂದ ಕೂಡಿದ ಕೌರವನು ಕಾನನವನ್ನು ಪ್ರವೇಶಿಸಿ ತಮ್ಮ ಕಾರ್ಯಕ್ರಮದಂತೆ ಮುನಿವೃಂದವನ್ನೆಲ್ಲಾ ಕೆಣಕಿ ತಪೋಭಂಗ ಮಾಡುತ್ತಾನೆ ಹಾಗೆಯೇ ಮುಂದುವರಿದು ಇಂದ್ರನ ಉದ್ಯಾನ ಸರೋ ವರನ್ನು ಅಪ್ಪಣೆ ಮೀರಿ ಪ್ರವೇಶಿಸುತ್ತಾನೆ. ಅಲ್ಲಿ ಮನ ಬಂದಂತೆ ವರ್ತಿಸಿ, ಕೊನೆಗೆ ಇಂದ್ರನಾಜ್ಞೆಯಂತೆ ಬಂದ ಚಿತ್ರಸೇನ ಎಲ್ಲರನ್ನು ಸದೆಬಡೆದು ಸೆರೆಹಿಡಿದು ರಥದಲ್ಲಿ ತಂದು ತುಂಬುತ್ತಾನೆ—

ಹಯದ ವದಿವಾಘೆಯಲ್ಲಿ ಬಾಹು
ಧ್ವಯವ ಬಿಗಿದನು ತನ್ನ ರಥದಲಿ
ಜಯ ವಿಹೀನನ ತಂದು ಕುಳ್ಳಿರಿಸಿದನು ಕೌರವನ।

ತನ್ನ ವೈಭವವನ್ನು ಹಾಗೂ ತೋಳ್ಬಲವನ್ನು ಪ್ರದರ್ಶಿಸಲೆಂದು ಬಂದ ದುರ್ಯೋಧನ ಹೆಡೆಮುರಿ ಕಟ್ಟಿಸಿ ಕೊಂಡು ನಗೆಗೀಡಾಗುತ್ತಾನೆ. ಇಲ್ಲಿ ದುರ್ಯೋಧನನಿ ಗಾಗುವ ಅವಮಾನ ರಾಜಸೂಯಯಾಗದಲ್ಲಿ ಆಗುವ ಅವಮಾನಕ್ಕಿಂತ ಹೆಚ್ಚಿನದು. ಆ ಸಂದರ್ಭದಲ್ಲಿ ಅವನು ಎಲ್ಲರ ಸಹಾನುಭೂತಿಗೂ ಪಾತ್ರನಾಗುತ್ತಾನೆ. ಆದರೆ ಇಲ್ಲಿ ಅದನ್ನೂ ಕಳೆದುಕೊಳ್ಳುತ್ತಾನೆ. ದುರ್ಯೋ ಧನ ಇದುವರೆಗೂ ಮಾಡಿದ ಅನ್ಯಾಯದ ಹಾಗೂ ಅಹಂಭಾವದ ಬುದ್ಧಿ ಎಲ್ಲರಿಗೂ ಅರ್ಥವಾಗುತ್ತದೆ.

ಅವನ ಮೇಲೆ ಮತ್ತೊಮ್ಮೆ ಕಿಡಿ ಕಾರಲು ಕಾರಣವಾಗುತ್ತವೆ. ಅವನಾಗಿಯೇ ಮಾಡಿಕೊಂಡ ದುರಂತ ಪ್ರಸಂಗಕ್ಕಾಗಿ ಅನುಕಂಪೆಗೆ ಬದಲಾಗಿ, ಅವನ ಸ್ಥಿತಿಯನ್ನು ಕಂಡು ನಗು ಬರುತ್ತದೆ. ಇಲ್ಲಿ ದುರ್ಯೋಧನ ಅತ್ಯಂತ ಹೀನಾವಸ್ಥೆಗೊಳಗಾಗುತ್ತಾನೆ. ರಾಜಸೂಯ ಯಾಗ ಸಂದರ್ಭದಲ್ಲಿ, ಅವನು ಇಂಥಾ ಒಂದು ಸ್ಥಿತಿಗೆ ಒಳಗಾದಾಗ ಇವನ ಕಡೆಯವರಾರೂ ಅಲ್ಲಿರುವುದಿಲ್ಲ. ಆದರೆ, ಇಲ್ಲಿ ನಾರೀವೃಂದವೇ ನೆರೆದಿದೆ. ತನ್ನ ತೋಳ್ಬಲ ಪರಾಕ್ರಮಗಳನ್ನು ಅವರ ಮುಂದೆ ಮೆರೆದು ತೋರಲೆಂದು ಬಂದವನು. ಆದರೆ ಈಗ ತಾನೇ ಅಸಹಾಯಕ ಸ್ಥಿತಿಗೊಳಗಾದುದು ಅಸಹನೀಯವಾಗಿದೆ. ಹೆಂಡತಿ ಪಾಂಡವರ ಬಳಿ ಹೋಗಿ ಪತಿ ಭಿಕ್ಷೆಯೆಂದು ಬೇಡಬೇಕಾದ ಪ್ರಸಂಗ ಉಂಟಾಗುತ್ತದೆ.

ಮಯ ನಿರ್ಮಿತ ಸೌಧದಲ್ಲಿ ಕೌರವ ಅವಮಾನಿತನಾದಾಗ ದ್ರೌಪದಿ ನಕ್ಕ ನಗೆ ಅಕ್ಷಮ್ಯ. ಆದರೆ ಇಲ್ಲಿ ಕ್ಷಮ್ಯ. ದುರ್ಯೋಧನ ಸಾಕಷ್ಟು ಹೀನ ಕೃತ್ಯವನ್ನು ಮಾಡಿದ್ದಾನೆ. ಕಲ್ಪನೆಗೂ ಬಾರದ ರೀತಿಯಲ್ಲಿ ಪಾಂಡವರನ್ನು ನೋಯಿಸಿದ್ದಾನೆ, ಅವಮಾನಗೊಳಿಸಿದ್ದಾನೆ. ಈಗಲೂ ಅವನು ಈ ಘೋಷಯಾತ್ರೆಯನ್ನು ಕೈಗೊಂಡದ್ದು ಇದೇ ಕಾರಣಕ್ಕಾಗಿಯೇ. ಆದುದರಿಂದಲೇ ಕೌರವ ಸೆರೆಯಾದ ವಿಷಯವನ್ನು ತಿಳಿದು ಧರ್ಮರಾಯ ಹೊರತಾಗಿ, ದ್ರೌಪದೀ ಸಮೇತ ಮಿಕ್ಕ ಪಾಂಡವರೆಲ್ಲರೂ ಸಂತೋಷಭರಿತರಾಗುತ್ತಾರೆ. ದ್ರೌಪದಿ ವ್ಯಂಗದ ಮಾತುಗಳನ್ನಾಡುವುದರ ಮೂಲ ಅವನನ್ನು ಮತ್ತೂ ಅವಮಾನಗೊಳಿಸುತ್ತಾಳೆ.

ಭಾವನವರರ್ತಿಯಲಿ ಜಲಕೇ
ಳೀವಿನೋದಕೆ ಬಂದು ಗಂಧ
ರ್ವಾವಳಿಯ ಕೇಳಿಯಲಿ ಚಿತ್ತೈಸಿದಿರಲಾಯೆನುತ।
ದೇವಿಯರು ನಸುನಗುತ ಚಿತ್ತದ
ಚಾವಡಿಯಲೋಲೈಸಿ ಕೊಂಡರು
ಭೂವಳಿಯದೇಕಾಧಿ ಪತ್ಯದ ಸೌಖ್ಯಸಂಪದವ॥

ದುರ್ಯೋಧನನಿಗೆ ಇಲ್ಲಿ ಆಗುವ ಮಾನಭಂಗ ಅಷ್ಟಿಷ್ಟಲ್ಲ. ಪಾಂಡವರ ಮುಂದೆ ವೈಭವ ಪೂರಿತವಾಗಿ ಮೆರೆದು, ಅವರನ್ನು ನೋಯಿಸಲೆಂದು ಬಂದ ಅವನಿಗೆ, ಶತ್ರುಗಳಿಂದಲೇ ಅವನ ಬಿಡುಗಡೆಯಾಗಬೇಕಾಗುತ್ತದೆ. ತನ್ನ ಪತ್ನಿ ಪಾಂಡವರಲ್ಲಿ ಹೋಗಿ ಪತಿಭಿಕ್ಷೆಯನ್ನು ಬೇಡಬೇಕಾಗುತ್ತದೆ.

ಅರಸಿಯರು ಸಖಿಯರು ಕುಮಾರಕ
ರರಸನನುಜರು ಹೆಂಡಿರನಿಬರು
ವೆರಸಿ ಬಂದಳು ಭಾನುಮತಿಯಮತನುಜನಾಶ್ರಮಕೆ।
ಕರುಣಿ ರಕ್ಷಿಸು ಸೋಮವಂಶೋ
ದ್ಧರಣ ರಕ್ಷಿಸು ಸತ್ಯಧರ್ಮದ
ಸಿರಿಯೆ ರಕ್ಷಿಸೆನುತ್ತ ಧೊಪ್ಪನೆ ಬಿದ್ದಳಂಘ್ರಿಯಲಿ॥

ಇಷ್ಟೇ ಅಲ್ಲದೆ ದುರ್ಯೋಧನನಿಗಾದ ಮಾನಭಂಗವನ್ನು ತಿಳಿದು ಯಾರು ಅತ್ಯಂತ ಸಂತೋಷದಿಂದ ಹಿಗ್ಗಿ, ಕುಣಿದು ಕುಪ್ಪಳಿಸುತ್ತಿದ್ದಳೋ ಅಂಥ ದ್ರೌಪದಿಯ ಬಳಿಗೆ ಬಂದು ಅಂಗಲಾಚಿ ಬೇಡುತ್ತಾಳೆ– ಭಾನುಮತಿ.

ರಾಯರಿಗೆ ಬಿನ್ನಹ ಮಾಡೌ
ತಾಯೆ ದುರುಪದಿ ದೇವಿಯೆ ಹಿರಿ
ದಾಯಸ ಪಡಿಸಿದನು ಕುರುಪತಿ ನಿನ್ನ ಮೈದುನನು।
ನೋಯಿಸಲು ಸಿರಿಖಂಡ ನಿಜಗುಣ
ದಾಯತವ ಬಿಡದಂತೆ ನೀವೇ
ಕಾಯಬೇಹುದು ಪತಿಯ ನೆಂದೊರಲಿದಳು
ಭಾನುಮತಿ॥

ಭಾನುಮತಿಯ ರೋದನ ಧ್ವನಿಯ ಮಂತ್ರ ಎಲ್ಲರ ಮನಸ್ಸನ್ನೂ ಕರಗಿಸುತ್ತದೆ. ಧರ್ಮರಾಯನ ಅನುಜ್ಞೆಯಂತೆ, ಅರ್ಜುನನು ಚಿತ್ರಸೇನನನ್ನು ಸದೆಬಡಿದು—

"ಕೌರವ ನೃಪನ ತಂದು ಕೃ
ಪಾಳುವಿನ ಚರಣಾಗ್ರದಲ್ಲಿ ಕೆಡಹಿದನು ಕಲಿಪಾರ್ಥ"

ಕೌರವನು ಅಸಹಾಯಕನಾಗಿ "ತೋಳ ಹಿಂಗಟ್ಟುಗಳ, ಮೂರೆಯ ಕಾಳಿಕೆಯ, ಬಿಡುದಲೆಯ ನೀರೊರೆವಾಲಿಗಳ, ಕುರುಭೂಪನಿದ್ದನು ತಮ್ಮದಿರು ಸಹಿತ" ಜೊತೆಗೆ ಗಾಯಗೊಂಡವನಿಗೆ ಸಾಸಿವೆಯನ್ನು ತೇದು ಬಳಿಯುವಂತೆ, ಅವಮಾನದ ಕೊಂಡದಲ್ಲಿ ಬೆಂದ ಅವನನ್ನು ಅಣಕದ ಮಾತುಗಳನ್ನಾಡಿ ಮತ್ತಷ್ಟು ನೋಯಿಸುತ್ತಾಳೆ—

ಬಂದಳಂಬುಜಾನನೆ ಸುಯೋಧನ
ನಂಪನನು ನೋಡಿದಳು ಸುಯ್ದಳು
ಬೆಂದ ವಿಧಿ ಬಂಧನವ ತುಂದುದೆ ಸಾರ್ವಭೌಮರಿಗೆ ||

ದ್ರೌಪದಿಯನ್ನು ತುಂಬಿದ ಸಭೆಯಲ್ಲಿ ಮಾನ ಬಂಗ ಮಾಡಲೆತ್ನಿಸಿದುದಕ್ಕೆ ತಕ್ಕ ಫಲವಿದೆಂದು ತೋರುತ್ತದೆ. ದುರ್ಯೋಧನ ಸ್ವಭಾವತಃ ಅತ್ಯಂತ ಅಭಿಮಾನಿ, ಅಂತಹವನಿಗೆ ಉಂಟಾದ ಈ ಒಂದು ಪ್ರಸಂಗದ ಜೊತೆಗೆ, ಧರ್ಮರಾಯನ ಉಪದೇಶ, ದ್ರೌಪದಿಯ ಅಣಕದ ಬಿರುನುಡಿಗಳು ಕೌರವನ ಮನಸ್ಸನ್ನು ಕೊರೆಯುತ್ತವೆ. ಆದ್ದರಿಂದಲೇ ಅವನು ಆತ್ಮಹತ್ಯೆಗೆ ಪ್ರಯತ್ನಿಸುತ್ತಾನೆ. ತಾನು ಪ್ರಾಣತ್ಯಾಗ ಮಾಡಲು ಸಿದ್ಧ, ಆದರೆ ತಾನಿರುವವರೆಗೆ ಪಾಂಡವರಿಗೆ ರಾಜ್ಯವನ್ನು ಬಿಟ್ಟುಕೊಡಲು ಸಿದ್ಧನಿಲ್ಲ. ಪಾಂಡವರ ಶಕ್ತಿ ಸಾಮರ್ಥ್ಯ ಈಗಾಗಲೇ ಚೆನ್ನಾಗಿ ಅವನಿಗೆ ಗೊತ್ತಾಗಿದೆ. ಆದರೂ 'ಮಣಿದು ಬದುಕುವವನಲ್ಲ ಕೌರವ'. ಕೌರವ ಮೊದಲಿನಿಂದಲೂ ಛಲದಲ್ಲಿಯೇ ಬದುಕಿದವನು, ಈಗಲೂ ಅದಕ್ಕಾಗಿಯೇ ತನ್ನ ಪ್ರಾಣ ನೀಗಲೂ ಸಿದ್ಧ.

* * *

### ೩. ಕೃಷ್ಣ ಸಂಧಾನ ಪ್ರಸಂಗ

ದುರ್ಯೋಧನನಿಗೆ ಸಂಭವಿಸುವ ಮತ್ತೊಂದು ಮುಖಭಂಗದ ಪ್ರಸಂಗವೆಂದರೆ, ಕೃಷ್ಣ ಸಂಧಾನದ ಪ್ರಸಂಗ. ಇಲ್ಲಿ ಕೌರವ ಮುಖ ಭಂಗಿತನಾದರೂ, 'ಜಟ್ಟಿ ಜಾರಿಬಿದ್ದರೂ ಮೀಸೆ ಮಣ್ಣಾಗಲಿಲ್ಲ' ವೆಂಬಂತೆ ಎಚ್ಚೆತ್ತುಕೊಳ್ಳುತ್ತಾನೆ. ದೈವದ ಲೀಲೆಯನ್ನು ತಿಳಿದ ವೇದಾಂತಿಯಂತೆ ಮಾತನಾಡುತ್ತಾನೆ. ಶ್ರೀ ಕೃಷ್ಣನು ಮುಂದೆ ಯುದ್ಧರಂಗದಲ್ಲಿ ಅರ್ಜುನನಿಗೆ ಬೋಧಿಸುವ ಗೀತೆಯ ಸಾರವನ್ನು ಇವನು ಇಲ್ಲಿಯೇ ಬೋಧಿಸುತ್ತಾನೆ. ದುರ್ಯೋಧನನ ಒಂದು ವಿಶಿಷ್ಟ ಮುಖ ಇಲ್ಲಿ ವ್ಯಕ್ತವಾಗುತ್ತದೆ. ಕೃಷ್ಣ ಸಂಧಾನಕ್ಕೆಂದು ಒಂದು ಸಂಧಾನದ ಮಾತನ್ನೆತ್ತಿದ್ದಾಗ—

ಮಣಿದು ಬದುಕುವವನಲ್ಲ ಹಗೆಯಲಿ
ಸೆಣಸಿ ಬಿಡುವವನಲ್ಲ ದೇವಥಾ
ರುಣಿಯ ಸಿರಿಗಳುಪುವವನಲ್ಲಳುಕಿಲ್ಲ ಕಾಯದಲಿ ।
ರಣ ಮಹೋತ್ಸವ ವೆಮ್ಮಮತ ಕೈ
ದಣಿಯೆ ಹೋಯ್ದಾಡುವೆವು ಕೃಷ್ಣನ
ಕಿಣಿಕಿದಲ್ಲದೆ ವಹಿಲದಲಿ ಕೈವಲ್ಯವಿಲ್ಲೆಂದ ||

ಕೃಷ್ಣನ ಮಹಿಮೆಯನ್ನು ಚನ್ನಾಗಿ ಅರಿತಿದ್ದಾನೆ ಕೌರವ, ಸಕಲ ಕಾರ್ಯಗಳಿಗೂ ಅವನೇ ಹೊಣೆಯೆಂಬುದನ್ನೂ ಬಲ್ಲ. ವೀರನಾಗಿ ಬದುಕಿ, ವೀರದಿಂದಲೇ ಮರಣವನ್ನಪ್ಪುವಾಸೆ ಅವನದು. ಅದಕ್ಕೇ 'ಕೃಷ್ಣನ ಕೆಣಕಿದಲ್ಲದೆ ವಹಿಲದಲಿ ಕೈವಲ್ಯವಿಲ್ಲೆಂದ.'

ಧೃತರಾಷ್ಟ್ರಾದಿ ಭೀಷ್ಮರೇ ಮೊದಲಾದ ಹಿರಿಯರು "ಕೃಷ್ಣನ ಮಾತಿಗೆ ಒಪ್ಪಿಕೊಂಡು, ಪಾಂಡವರ ರಾಜ್ಯವನ್ನು ಹಿಂತಿರುಗಿಸು" ಎಂದು ನುಡಿದಾಗ, ದುರ್ಯೋಧನ ಆಡುವ ಮಾತುಗಳು ಅವನ ಕೃಷ್ಣ ಭಕ್ತಿಯನ್ನು ವ್ಯಕ್ತಪಡಿಸುತ್ತವೆ—

ಹಳಚುವವು ಹಾಹೆಗಳು ಸೂತ್ರವ
ನಲುಗಿಸಿದೊಡೆ ತತ್ಪುಣ್ಯ ಪಾಪಾ
ವಳಿಗಳಾ ಹಾಹೆಗಳಿಗುಂಟೇ ಸೂತ್ರಧರನಿರಲು ।
ಕೊಲುವವನನ್ಯರ ನನ್ಯರಿಂದವೆ
ಕೊಲಿಸುವನು ಕಮಲಾಕ್ಷನಲ್ಲದೆ
ಉಳಿದ ಜೀವವ್ರಾತಕೀ ಸ್ವಾತಂತ್ರ್ಯವಿಲ್ಲೆಂದ ||

ಕೌರವ ಇಲ್ಲಿ ವೇದಾಂತಿಯಾಗಿ ಕಂಡು ಬರುತ್ತಾನೆ. "ನಾವೆಲ್ಲರೂ ಸೂತ್ರದ ಗೊಂಬೆಗಳು. ನಮ್ಮನ್ನು ನಿಯಂತ್ರಿಸುವ ಶಕ್ತಿಯೇ ಬೇರೊಂದುಂಟು, ಅವನು ಆಡಿಸಿದಂತೆ ನಾವುಗಳು ಆಡುತ್ತೇವೆ" ಎಂಬುದನ್ನು ಅವನೂ ಬಲ್ಲ. ಸಂಧಿ ಮಾಡಿಕೊಳ್ಳುವುದು ಕೃಷ್ಣನಿಗೂ ಇಷ್ಟವಿರಲಿಲ್ಲ. ದುರ್ಯೋಧನನೂ ಆ ಸತ್ಯವನ್ನೇ ನುಡಿಯುತ್ತಾನೆ. ಕೃಷ್ಣ ಸಂಧಿಗೆಂದು ಬರುವಾಗಲೇ ದ್ರೌಪದಿಗೆ ಹೇಳಿ ಬಂದಿರುತ್ತಾನೆ—

ಕಾಳಗವನೆ ಬಲಿದು ತಹೆನಿವ
ರೇಳಿಲವ ಮಾಡಿದೊಡೆ ರಿಪುಗಳ
ಸೀಳಿ ಕರುಳನು ಮುಡಿಸದಿಹೆನೇ ನಿನ್ನ ಕಬರಿಯಲಿ ।

ದುರ್ಯೋಧನ ಇದನ್ನು ಸಮರ್ಥಿಸುವ ರೀತಿಯಲ್ಲಿ ಕಾಳಗ

ವನ್ನೇ ಅನುಮೋದಿಸುತ್ತಾನೆ.

ಕೃಷ್ಣನ ಬಗ್ಗೆ ಕೌರವ ಇಷ್ಟೆಲ್ಲಾ ತಿಳಿದಿದ್ದರೂ, ಸಂಧಾನಕ್ಕೆಂದು ಸಭೆಗೆ ಬಂದಾಗಲೂ, ಭೀಷ್ಮ ದ್ರೋಣಾದಿ ಹಿರಿಯರು ಎದ್ದುನಿಂತರೂ, ದುರ್ಯೋಧನ ತನ್ನ ಆಸನ ದಲ್ಲಿ ಅಲುಗದೆ ಕೂತಿರುತ್ತಾನೆ. ಇದು ನಮ್ಮನ್ನು ಚಕಿತ ಗೊಳಿಸಿದರೂ, ಕೌರವನ ಅಭಿಮಾನದ ಹೆಡೆ ಇಂಥಾ ಕಷ್ಟೆಯೇ ಹೆಡೆ ಎತ್ತಿ ನಿಲ್ಲುವುದು ಎಂಬುದನ್ನು ನೆನೆಸಿ ಕೊಳ್ಳಬೇಕಾಗುತ್ತದೆ. ಅಲ್ಲದೆ ಕೃಷ್ಣನ ಬಗ್ಗೆ ದುರ್ಯೋಧನನಿಗೆ ಕೋಪವೂ ಇದೆ. ಶ್ರೀ ಕೃಷ್ಣನು ಹಸ್ತಿನಾ ಪುರಕ್ಕೆ ಬರುವ ವಿಷಯವನ್ನು ತಿಳಿದು, ತನ್ನರಮನೆಗೆ ಕೃಷ್ಣ ಬಂದೇ ಬರುವನೆಂದು ತಿಳಿದು—

.... .... .... ತನ್ನರಮನೆಗೆ ಹರಿ
ಬಾರದಿಹನೆಂದಖಿಳ ವಿಧದಲಿ
ಸಾರವಸ್ತುವ ತರಿಸಿಯಾರೋಗಣೆಯ ಮಾಡಿಸಿದ ||

ನಡುವೆ ಮಣಿಮಂಜದಲಿ ಮೇಲ್ವಾ
ಸಡಕಿಲನು ಹಚ್ಚಡಿಸಿದರು ಮೇ
ಲಡರಿದವು ಮಣಿ ಖಚಿತ ಚಿತ್ರದ ಮೇಲುಕಟ್ಟುಗಳು
ಉಡುಗೊರೆಯ ತರಿಸಿದನು ರಾಯನ
ಮಡದಿಯರು ಹೊಂಗಳಸ ಜಲವನು
ಪಡಿಗವನು ಹಿಡಿದಸುರರಿಪುವಿನ ಬರುವ ಹಾರಿದರು||

ಇಷ್ಟೆಲ್ಲಾ ವೈಭವದಿಂದ ಸಿದ್ಧನಾಗಿರುತ್ತಾನೆ– ಕೃಷ್ಣನ ಬರುವಿಕೆಗೆ ಕಾದು. ಆದರೆ, ಕೃಷ್ಣ ಅವನಿಗೆ ಅವಮಾನ ಗೊಳಿಸಲೋಸುಗವೋ ಎಂಬಂತೆ, ವಿದುರನ ಮನೆಗೆ ಹೋಗುತ್ತಾನೆ. ಕೌರವನಿಗೆ ಇದು ಅವಮಾನ ಮಾಡಿ ದಂತಾಗುತ್ತದೆ. ಈ ಕಾರಣದಿಂದಲೋ ಏನೋ ಆ ತಕ್ಷಣ ತೋರಬಹುದಾದ ಪ್ರತಿಕ್ರಿಯೆಯಾಗಿ, ಕೃಷ್ಣ ಬಂದರೂ ತನ್ನ ಆಸನದಿಂದ ಏಳದೆಯೇ ಕುಳಿತಿರುತ್ತಾನೆ. ಆದರೆ, 'ಸೆಣಸು ಸೇರದ' ಆ ದೇವನು—

.....................................
..................................... ಧಾ
ರುಣಿಯ ನೊತ್ತಿದನುಂಗುಟದ ತುದಿಯಿಂದ ನಸುನಗುತ
ಮಣಿಖಚಿತ ಕಾಂಚನದ ಪೀಠದ
ಗೊಣಸು ಮುರಿದುದು ಮೇಲೆಸುರಸಂ
ದಣಿಗಳಾ ಎನೆ ಕವಿದು ಬಿದ್ದನು ಹರಿಯ ಚರಣದಲಿ||

ಹೀಗೆ ಬಿದ್ದ ಕೌರವನಿಗೆ ಹೆಚ್ಚು ಅವಮಾನವಾದಂತಾಗಿ, ಮುಖಭಂಗಿತನಾದರೂ ಅದನ್ನು ತೋರಗೊಡದೆ ದುಗುಡ ದಿಂದ, ಗಂಭೀರವಾಗಿ ನಿಂತಿರುತ್ತಾನೆ—

ಕುಶಲವೇ ಕೌರವರಾಯ ಬಾಕ್ಕೈ
ಮುಸುಡ ದುಗುಡವಿದೇಕೆ ಬಾಯೆಂ
ದಸುರರಿಪು ಕೌರವನ ಕರೆ..........."ದಾಗ

ಜಟ್ಟಿ ಜಾರಿ ಬಿದ್ದರೂ ಅದು ಒಂದು ಪಟ್ಟೆಂಬಂತೆ, ತಕ್ಷಣ ಆ ದುಗುಡದ ಕಾರಣವನ್ನು ಕೃಷ್ಣನ ಮೇಲೆಯೇ ಹಾಕುತ್ತಾನೆ—

ನೀವು ಬಿಜಯಂಗೈವಿರೆಂದು ಮ
ಹಾವಿಳಾಸದೊಳಳವಡಿಸಿ ನಾ
ನಾವಿಧದ ಷಡುರಸವ ಗರುಡಿಯಲಿಂದು ಸವೆಸಿದೆನು
ದೇವ ನಮ್ಮರಮನೆಗೆ ಬಾರದೆ
ನೀವು ವಿದುರನ ಮನೆಯಲುಂಡಿರಿ
.........................................

ಎಂದು ತನ್ನ ದುಗುಡಕ್ಕೆ ಕಾರಣವನ್ನು ತಿಳಿಸುತ್ತಾನೆ. ಸಂಧಿಯ ಮಾತನ್ನೆತ್ತಿದಾಗ, ದುರ್ಯೋಧನನು ಆಡುವ ಮಾತುಗಳಿಂದ ಕೃಷ್ಣನ ಬಗ್ಗೆ ಅವನಿಗಿದ್ದ ಗೌರವ ಭಾವನೆ ಅರ್ಥವಾಗುತ್ತದೆ. ಕೃಷ್ಣನಲ್ಲಿ ಅವನು ದೈವಾಂಶ ವನ್ನು ಕಂಡಿದ್ದನೆಂಬುದು ಅರಿವಾಗುತ್ತದೆ. ಆದರೆ, ಅವನಲ್ಲಿ ಅಚಲವಾಗಿ ಬೇರೂರಿದ್ದ ಛಲದ ಹಾಗೂ ಅಭಿ ಮಾನದ ಪರದೆಗಳು ಅವನ್ನು ಮುಸುಕುಗೊಳಿಸಿದ್ದುವು. ಆ ಪರದೆಯನ್ನು ದಾಟಿ ಹೋಗುವಲ್ಲಿ ಅವನ ದೃಷ್ಟಿ ಮಂದವಾಗಿತ್ತು. ಇದರಲ್ಲಿ ವಿಧಿಯ ಕೈವಾಡವೂ ಇಲ್ಲ ದಿಲ್ಲ. ರಕ್ತಗತವಾಗಿ ಬಂದ ಛಲ ಅವನಲ್ಲಿ ಅಚಲವಾ ಗಿದ್ದುದೇ ಇಷ್ಟಕ್ಕೆಲ್ಲ ಕಾರಣವಾಯಿತು. ರಾವಣ ತನ್ನೆಲ್ಲ ಶಕ್ತಿಯನ್ನು 'ಹೆಣ್ಣಿ'ಗಾಗಿ ಮುಡಿಪಾಗಿಟ್ಟು ಅದರಲ್ಲಿ ಅಂತ್ಯ ವನ್ನು ಪಡೆದಂತೆ ಹಿರಣ್ಯಕಶಿಪು ತನ್ನೆಲ್ಲ ಶಕ್ತಿಯನ್ನೂ 'ಅಹಂಕಾರ'ಕ್ಕಾಗಿ ಮುಡಿಪಾಗಿಟ್ಟು ಅದರಲ್ಲಿ ತನ್ನ ಅಂತ್ಯ ವನ್ನು ಕಂಡಂತೆ, ದುರ್ಯೋಧನ ತನ್ನೆಲ್ಲ ಶಕ್ತಿಯನ್ನು

'ಛಲ'ಕ್ಕೆ ಮುಡಿಪಾಗಿಟ್ಟು ಅಂತ್ಯಗೊಳ್ಳುತ್ತಾನೆ.

* * *

ಈ ಮೂರು ಪ್ರಸಂಗಳಲ್ಲಿ ಕಂಡು ಬರುವ ದುರ್ಯೋಧನನ ಮನಸ್ಥಿತಿಯನ್ನು ಪರಿಶೀಲಿಸ ಹೊರಟರೆ, ರಾಜಸೂಯ ಯಾಗದ ಸಂಪರ್ಭದಲ್ಲಿ ದುರ್ಯೋಧನನಿಗೆ ಆದ ಅವಮಾನ ವಿನಾ ಕಾರಣವಾದದ್ದು. ಅಲ್ಲಿ ಆಗ ಭೀಮ, ದ್ರೌಪದಿಯರು ಅಟ್ಟಹಾಸದಿಂದ ನಕ್ಕ ನಗೆ, ಅವನ ಕೋಪಕ್ಕೆ ತುಪ್ಪ ಸುರಿದಂತಾಗಿ ಅದು ಮತ್ತಷ್ಟು ಹೆಚ್ಚಾಯಿತು. ದುರ್ಯೋಧನ ಒಂದು ದೇಶದ ರಾಜ, ಅಲ್ಲಿಗೆ ಅತಿಥಿ. ಹೀಗಿದ್ದರೂ ದ್ರೌಪದಿ ಮೊದಲಾದವರು ಗಹಗಹಿಸಿ ನಕ್ಕದ್ದು ಮಾನಧನನೆನಿಸಿದ ಅವನಿಗೆ ಮುಂದೆ ದ್ರೌಪದಿಯ ಸೀರೆಯನ್ನು ತುಂಬಿದ ಸಭೆಯಲ್ಲಿ ಸುಲಿಸುವಷ್ಟು ರೋಷವನ್ನು ಬಿತ್ತಲು ಕಾರಣವಾಯಿತು. ದುರ್ಯೋಧನ ಹೀಗೆ ಮಾಡಿದ್ದು ಸರ್ವಾಂಗ ಅಪರಾಧ, ನಿಜ. ಆದರೆ ಆಗ ಅವನಿಗೆ ಬೇಕಾದದ್ದು ಧರ್ಮಾಧರ್ಮಗಳ ವಿವೇಚನೆಯಲ್ಲ, ಸೇಡಿಗೆ ಸೇಡಿನ ಪ್ರಶ್ನೆ. ಇದರಿಂದಾಗಿ ಮುಂದಿನ ಮಹಾಪ್ರತಿಜ್ಞೆಗಳಿಗೆ ನಾಂದಿಯಾಗುತ್ತದೆ.

ಇನ್ನು ಎರಡನೆಯ ಪ್ರಸಂಗವನ್ನು ಗಮನಿಸಿದರೆ, ಇದು ದುರ್ಯೋಧನನು ತಾನಾಗಿಯೇ ಮಾಡಿಕೊಂಡಂತಹುದು. ನಿಂತನೀರಿಗೆ ಕಲ್ಲನ್ನು ಎಸೆದು ಮುಖಕ್ಕೆ ಸಿಡಿಸಿಕೊಂಡಂಥ ಪ್ರಸಂಗ. ಇಲ್ಲಿ ದುರ್ಯೋಧನನಿಗೆ ಸಾಕಷ್ಟು ಮುಖಭಂಗವಾಗುತ್ತದೆ. ಇದರಿಂದಾಗಿ ಅವನು ಆತ್ಮಹತ್ಯೆಗೂ ಕೈಹಾಕುತ್ತಾನೆ. ಈ ಪ್ರಸಂಗದಿಂದಾಗಿ, ಅವನಿಗೆ ಪಾಂಡವರ ಮೇಲಿದ್ದ ಸೇಡಿನ ಕಿಡಿ ಎಂಥಹುದೆಂಬುದು ಅರ್ಥವಾಗುತ್ತದೆ. ಅವರಿಗೆ ಎಷ್ಟು ತೊಂದರೆ ಕೊಟ್ಟರೂ ಕೌರವನಿಗೆ ತೃಪ್ತಿಯಿಲ್ಲ. ಘೋಷಯಾತ್ರೆಯನ್ನ ಈ ಉದ್ದೇಶದಿಂದಲೇ ಕೈಗೊಳ್ಳುತ್ತಾನೆ.

ಮೂರನೆಯ ಪ್ರಸಂಗದಲ್ಲಿ ದುರ್ಯೋಧನ ಎಷ್ಟೇ ಮುಖಭಂಗಿತನಾದರೂ, ಬೇರೆಲ್ಲೂ ವ್ಯಕ್ತವಾಗದ ಅವನ ಇನ್ನೊಂದು ಮುಖ ಇಲ್ಲಿ ವ್ಯಕ್ತವಾಗುತ್ತದೆ. ಅವನು ಇಲ್ಲಿ ಕೃಷ್ಣಭಕ್ತನಂತೆ ಮೆರೆಯುತ್ತಾನೆ. "ಎಲ್ಲವೂ ಭಗವಂತನ ಲೀಲೆ, ಸಾವು ಅವನ ಕೈಗೊಂಬೆಗಳು" ಎಂದು ಹೇಳುವಷ್ಟು ತತ್ತ್ವಜ್ಞಾನಿ ಆದರೂ, ಯುದ್ಧದ ಬಗ್ಗೆ ಅವನ ನಿಲುವು ಮಾತ್ರ ಅಚಲ. ಅದಕ್ಕೂ ಕೃಷ್ಣನೇ ಕಾರಣವೆಂದು ಹೇಳುವಷ್ಟು ಚತುರ. ಪಾಂಡವರಿಗೆ ರಾಜ್ಯವನ್ನು ಕೊಡದೆ ಸತಾಯಿಸುವುದಕ್ಕೆ ಇನ್ನೊಂದು ಕಾರಣವೆಂದರೆ, ಕೌರವನಿಗೆ, ಪಾಂಡವರ ಹುಟ್ಟಿನ ಬಗ್ಗೆಯೇ ಇದ್ದಂಥಾ ತಿರಸ್ಕಾರ. ತನ್ನ ವಂಶದ ಬಗ್ಗೆ ಅವನಿಗಿದ್ದಂತಾ ಹೆಚ್ಚಿನ ಅಭಿಮಾನ. ಅದರಿಂದಾಗಿ ತನ್ನ ರಾಜ್ಯದಲ್ಲಿ ಅವರಿಗೆ ಯಾವ ಹಕ್ಕೂ ಇಲ್ಲ ಎಂಬ ಘೋಷಣೆ ದುರ್ಯೋಧನನದು. ಇದು ಅವನು ಕೃಷ್ಣನಿಗೆ ಹೇಳುವ ಮಾತುಗಳಿಂದ ಸ್ಪಷ್ಟವಾಗುತ್ತದೆ—

ಸೇರುವನು ಸಕಳಂಕ ಚಂದ್ರನು
ನಾರಿಧಿಗೆ ನೀನಖಿಳ ಗೋಪೀ
ಜಾರ ಜಾರೆಯ ಮಕ್ಕಳಿಗೆ ನೀ ಜೀವ ತಪ್ಪೇನು।
ಆರು ತಮ್ಮಂದದ ಮಹಾತ್ಮರ
ಸೇರು ವರಲೈ ಪಾಂಡುಪುತ್ರರ
ಕೂರುಮೆಗೆ ನಾನೆನ್ನೆ ನೀ ಬಂದನುವ ಹೇಳೆಂದ॥

ಅಲ್ಲದೆ ಅವನಿಗೆ ಕೈಯೊಡ್ಡಿ ಬೇಡುವುದೆಂದರೆ ಆಗದು. ಅವನು ಹಾಗೆ ಬೇಡಿದವನೂ ಅಲ್ಲ: ಹಾಗೆ ಬೇಡುವವರನ್ನು ಕಂಡರೂ ಅವನು ಬಲ್ಲ ಪಾಂಡವರ ಬಗ್ಗೆ ಅವನಿಗಿರುವ ತಿರಸ್ಕಾರವೂ ಅದೇ. ರಾಜ್ಯವನ್ನು ಬೇಡುವುದಾದರೆ, ಅವರು ರಾಜವಂಶದವರೇ ಅಲ್ಲ ಎನ್ನುತ್ತಾನೆ. ಯುದ್ಧವನ್ನು ಬೇಡುವರಲ್ಲದೆ, ರಾಜ್ಯವನ್ನು ಬೇಡುವರೇ ಎನ್ನುವಷ್ಟು ಅಭಿಮಾನಿ ವೀರ ಕೌರವ.

ಈ ಮೂರು ಪ್ರಸಂಗಗಳನ್ನೂ ಕುಮಾರವ್ಯಾಸ ಅತ್ಯಂತ ಚತುರತೆಯಿಂದ ಸಾಗಿಸಿಕೊಂಡು ಹೋಗಿದ್ದಾನೆ. ಎಂಥಾ ಕಠಿಣ ಪರಿಸ್ಥಿತಿಯಲ್ಲೂ ತನ್ನ ಅಭಿಮಾನಕ್ಕೆ ಧಕ್ಕೆ ಭಾರದ ರೀತಿಯಲ್ಲಿ ದುರ್ಯೋಧನ ತಟಸ್ಥ ರೀತಿಯಲ್ಲಿ ವರ್ತಿಸಿದ್ದಾನೆ. ಘೋಷಯಾತ್ರೆಯ ಸಂದರ್ಭದಲ್ಲಿ ಅಂಥ ಕ್ಲಿಷ್ಟ ಪರಿಸ್ಥಿತಿಯಲ್ಲಿದ್ದಾಗಲೂ ಅವನು ಒಂದು ಮಾತನ್ನೂ ಆಡುವುದಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಮತ್ತೆಲ್ಲಿಯೂ ವ್ಯಕ್ತವಾಗದ ದುರ್ಯೋಧನನ ಒಂದು ವಿಶಿಷ್ಟ ಮುಖ ಪರಿಚಯ ಕೃಷ್ಣ ಸಂಧಾನದ ಸಮಯದಲ್ಲಿ ನಮಗಾಗುತ್ತದೆ.

# ಕೃಷ್ಣಾ ಕುಮಾರಿ
## (ನಾಟಕ)

—ಬಿ. ಕೆ. ತಿಮ್ಮಪ್ಪ, ಎಂ. ಎ., ಕಾಸರಗೋಡು

**ಪಾತ್ರಗಳು**

| | | | |
|---|---|---|---|
| ಭೀಮಸಿಂಹ: | ಉದಯಪುರದ ಮಹಾರಾಜ. | ಜಗತ್ಸಿಂಹ: | ಜಯಪುರದ ರಾಜ. |
| ಕೃಷ್ಣಾ ಕುಮಾರಿ: | ಭೀಮಸಿಂಹನ ಮಗಳು. | ಮಾನಸಿಂಹ: | ರಾಜ. |
| ಬಲೇಂದ್ರ ಸಿಂಹ: | ಭೀಮಸಿಂಹನ ತಮ್ಮ. | ಧನದಾಸ: | ಜಗತ್ಸಿಂಹನ ಮಿತ್ರ. |

ಮಂತ್ರಿಗಳು, ದ್ವಾರಪಾಲಕರು ಇತ್ಯಾದಿ......

[ ಜಯಪುರದ ಜಗತ್ಸಿಂಹನ ಅರಮನೆ, ಜಗತ್ಸಿಂಹನ ಮಿತ್ರ ಧನದಾಸ ನಡೆದು ಬರುವ ಶಬ್ದ]

ಧನದಾಸ : (ಪ್ರವೇಶಿಸಿ) ಜಯಪುರದ ಜಗತ್ಸಿಂಹ ಮಹಾರಾಜರಿಗೆ ವಿಜಯವಾಗಲಿ !

ಜಗತ್ಸಿಂಹ : ಬಾ ಧನದಾಸ ! ನೀನು ಹೋದ ಕಾರ್ಯ ವೇನಾಯಿತು ?

ಧನದಾಸ : ಈ ಧನದಾಸ ಕೈಗೊಂಡ ಕಾರ್ಯದಲ್ಲಿ ವಿಜಯಿಯಾಗದೆ ಹಿಂದಿರುಗುವುದುಂಟೆ ಪ್ರಭೂ ? ಇದೋ ಒಪ್ಪಿಸಿಕೊಳ್ಳಿ. ಉದಯಪುರದ ರಾಜಕುಮಾರಿ, ಅನುಪಮ ಸುಂದರಿ ಕೃಷ್ಣಾಕುಮಾರಿಯ ಭಾವಚಿತ್ರವನ್ನು.

ಜಗತ್ಸಿಂಹ : ಎಲ್ಲಿ ಇತ್ತ ಕೊಡು. (ಚಿತ್ರವನ್ನು ನೋಡುತ್ತ) ಆಹಾ! ಜಗತ್ತಿನ ಸ್ತ್ರೀಸೌಂದರ್ಯವನ್ನೇ ಸೆರೆಹಿಡಿದ ಕಲಾಕೃತಿ....ವಿಧಾತೃವಿನ ವಿನೂತನ ಸೃಷ್ಟಿ.... ಧನದಾಸ, ಈ ಭಾವ ಚಿತ್ರವನ್ನು ನೋಡುತ್ತಾ ನೋಡುತ್ತಾ ನನ್ನನ್ನೇ ನಾನು ಮರೆಯುತ್ತಿದ್ದೇನೆ. ಅಮರ ಲೋಕದಲ್ಲೂ ಇಂತಹ ಚೆಲುವೆ ದೊರೆಯುವುದು ದುರ್ಲಭ. ಈಕೆಯನ್ನು ಕೈಹಿಡಿಯುವ ಪುಣ್ಯ ನನಗಿದೆಯೆ ಧನದಾಸ ? ಈ ಸುಂದರಿ ನನ್ನ ಕೈವಶಳಾಗುವ ಬಗೆ ಹೇಗೆ ?

ಧನದಾಸ : ಉಪಾಯವಿದೆ ಮಹಾಪ್ರಭು !

ಜಗತ್ಸಿಂಹ: ಹೇಳು; ಬೇಗ ಹೇಳು.

ಧನದಾಸ: ಭೀಮಸಿಂಹ ಮಹಾರಾಜರಿಗೆ ತಮ್ಮ ಮನದಿಂಗಿತವನ್ನು ತಿಳಿಸಿ ಮಂಗಳ ದ್ರವ್ಯಗಳೊಂದಿಗೆ ರಾಯಸವನ್ನೂ ಕಳುಹಿಸಿ. ಸಂಬಂಧ ಬೆಳೆಸುವುದಕ್ಕೆ ಒಪ್ಪಿದರೆ ಸರಿ. ಇಲ್ಲದಿದ್ದಲ್ಲಿ ಯುದ್ಧ ! ಪ್ರಭುಗಳೇ.... ಭೀಮಸಿಂಹ ಮಹಾರಾಜ ಪರಾಕ್ರಮಿಯಲ್ಲ. ರಣಭೀರು ! ಯುದ್ಧದ ಹೆಸರೆತ್ತಿದರೆ ಸಾಕು ನಡುಗುತ್ತಾನೆ.... ಆಗ ನಿಮ್ಮ ಕಾರ್ಯ ಸುಲಭವಾಗಿ ಕೈಗೂಡುತ್ತದೆ.

ಜಗತ್ಸಿಂಹ: ಭಲೆ ಧನದಾಸ ! ನಿನ್ನ ಬುದ್ಧಿವಂತಿಕೆಗೆ ಮೆಚ್ಚಿದೆ. ಈ ಜಗತ್ತಿನ ಅಪೂರ್ವ ಸುಂದರಿಯಾದ ಈಕೆಯನ್ನು ಪಡೆಯುವ ಮಾರ್ಗವನ್ನು ತೋರಿಸಿಕೊಟ್ಟೆ. ಅದಕ್ಕಿದೋ ನನ್ನ ಉಡುಗೊರೆ. (ಮುತ್ತಿನ ಹಾರವನ್ನು ಎಸೆಯುತ್ತಾನೆ)

ಧನದಾಸ : ಪ್ರಭುಗಳ ಸಂತೋಷವೇ ನನ್ನ ಸಂತೋಷ. ತಮ್ಮ ಪಾದ ಸೇವೆಗಾಗಿ ಈ ಸೇವಕ ಸದಾ ಸಿದ್ಧನಾಗಿದ್ದಾನೆ. ಸ್ವಾಮೀ, ನಾನಿನ್ನು ಬರುತ್ತೇನೆ. ಅಪ್ಪಣೆಯಾಗಲಿ.

ಜಗತ್ಸಿಂಹ: ಆಗಬಹುದು;

(ಕೃಷ್ಣಾಕುಮಾರಿಯ ಭಾವ ಚಿತ್ರವನ್ನು ನೋಡುತ್ತಾ) (ಭಾವಪೂರ್ಣವಾಗಿ) ಓ ನನ್ನ ಬೆಳದಿಂಗಳೇ....ಧರೆಗಿಳಿದು ಬಂದ ಸೌಂದರ್ಯ ದೇವತೆಯೆ....ನಾನೆಂದು ಕಾಣುವೆನು ನಿನ್ನ ?....(ಸ್ವಲ್ಪ ರಾಗವಾಗಿ)

"ಲೋಕ ಲೋಕವ ಬಳಸಿ ಬಂದರು
ದೊರೆಯಳೀ ಬಗೆ ಸುಂದರಿ,
ನನ್ನ ಕಣ್ಣನು ತುಂಬಿ ನಿಂತಿಹ
ಸ್ವರ್ಗದಪ್ಸರೆ ಕೃಷ್ಣೆಯು...."

ಓ ! ಇದೇನಿದು ? ಭಾವ ಚಿತ್ರವನ್ನು ನೋಡುತ್ತಾ

ನೋಡುತ್ತಾ ಭಾವ ಪರವಶನಾಗುತ್ತಿದ್ದೇನೆ .... ಇನ್ನು ಇವಳನ್ನು ಸಾಕ್ಷಾತ್ತಾಗಿ ಕಂಡಲ್ಲಿ....ಕಾಣಬೇಕು ಕಾಣಬೇಕು....ಕಾಣಲೇಬೇಕು ಕೃಷ್ಣೆಯನ್ನು!

(ಕೈ ಚಪ್ಪಾಳೆ ತಟ್ಟಿ) ಯಾರಲ್ಲಿ ?

(ಸೇವಕ ಪ್ರವೇಶಿಸಿ) ಮಹಾ ಪ್ರಭು!

ಜಗತ್ಸಿಂಹ: ಮಂತ್ರಿಗಳನ್ನು ಬರಮಾಡು.

ಸೇವಕ: ಅಪ್ಪಣೆ ಮಹಾಸ್ವಾಮಿ.

(ಮಂತ್ರಿ ಬರುತ್ತಾನೆ)

ಜಗತ್ಸಿಂಹ: ಬನ್ನಿ ಮಂತ್ರಿಗಳೆ, ನಾವು ಉದಯಪುರದ ಭೀಮಸಿಂಹನ ಮಗಳು ಕೃಷ್ಣಾಕುಮಾರಿಯನ್ನು ಕೈ ಹಿಡಿಯುವ ಆಲೋಚನೆಯಲ್ಲಿದ್ದೇವೆ. ಅದನ್ನು ಭೀಮಸಿಂಹನಿಗೆ ರಾಯಸದ ಮೂಲಕ ತಿಳಿಸಿರಿ. ಭೀಮಸಿಂಹ ನಮ್ಮ ಸಂಬಂಧಕ್ಕೊಪ್ಪಿದರೆ ಸರಿ.. ಇಲ್ಲವಾದರೆ, ಯುದ್ಧದ ಮೂಲಕವಾದರೂ ಸರಿಯೆ ಸನ್ನಿಧಾನಕ್ಕೆ ಕೃಷ್ಣಾಕುಮಾರಿಯನ್ನು ಪಡೆಯುವ ಮನಸ್ಸಿದೆ ಎಂದು ತಿಳಿಸಿರಿ.

ಮಂತ್ರಿ: ಒಂದು ವಿಷಯ ಪ್ರಭುಗಳೆ. ಕೃಷ್ಣಾಕುಮಾರಿಯನ್ನು ಜೋಧಪುರದ ಅರಸ ವೀರಸಿಂಹನಿಗೆ ಕೊಡುವುದಾಗಿ ನಿಶ್ಚಯವಾಗಿತ್ತು. ಆದರೆ........

ಜಗತ್ಸಿಂಹ: ಏನು ಆದರೆ ?

ಮಂತ್ರಿ: ವೀರಸಿಂಹ ಅಕಾಲ ಮೃತ್ಯುವಿಗೊಳಗಾದ ಬಳಿಕ........

ಜಗತ್ಸಿಂಹ: ಒಳ್ಳೆಯದೇ ಆಯಿತು.

ಮಂತ್ರಿ: ಹಾಗಲ್ಲ ಪ್ರಭೋ! ವೀರಸಿಂಹನ ನಂತರ ಸಿಂಹಾಸನಕ್ಕೆ ಉತ್ತರಾಧಿಕಾರಿಯಾದ ಮಾನಸಿಂಹ, ಕೃಷ್ಣಾ ಕುಮಾರಿಯನ್ನು ವರಿಸುವ ಆಲೋಚನೆಯಲ್ಲಿದ್ದಾನೆ ಎನ್ನುವ ಸುದ್ದಿಯಿದೆ.

ಜಗತ್ಸಿಂಹ: ಮಾನಸಿಂಹ ಕೃಷ್ಣಾ ಕುಮಾರಿಯನ್ನು ಬಯಸಬಹುದು. ಆದರೆ ಕೃಷ್ಣಾ ಕುಮಾರಿಯೂ ಒಪ್ಪಬೇಡವೆ ?

ಮಂತ್ರಿ: ಆಕೆಯೂ ಮಾನಸಿಂಹನಲ್ಲಿ ಅನುರಕ್ತಳಾಗಿದ್ದಳೆಂಬ ಸುದ್ದಿಯಿದೆ.

ಜಗತ್ಸಿಂಹ: [ಸಿಟ್ಟಿನಿಂದ] ಆ ಮಾನಗೆಟ್ಟ ಮಾನಸಿಂಹನಿಗಿದೆಯೇ ಕೃಷ್ಣಾ ಕುಮಾರಿಯನ್ನು ವರಿಸುವ ಸಾಮರ್ಥ್ಯ ? ಸಂದರ್ಭ ಬಂದರೆ ನಾವು ಅವನ ಮೇಲೂ ದಂಡೆತ್ತಿ ಹೋಗಿ ಅವನನ್ನು ಅಧೀನ ಪಡಿಸಿಕೊಳ್ಳಬಲ್ಲೆವು ಈ ಜಗತ್ಸಿಂಹ ಮುನಿದರೆ ಎಂಥವನು ಎನ್ನುವುದು ಆ ಮಾನಸಿಂಹನಿಗೂ ತಿಳಿದಿದೆ.

ಮಂತ್ರಿ: ಇದ್ದ ವಿಷಯವನ್ನು ತಿಳಿಸಿದೆ. ಇನ್ನು ಪ್ರಭುಗಳ ಚಿತ್ತ.

ಜಗತ್ಸಿಂಹ: ಸರಿ; ನಮ್ಮ ಅಭಿಲಾಷೆಯನ್ನು ಭೀಮಸಿಂಹನಿಗೆ ಆದಷ್ಟು ಬೇಗ ತಿಳಿಸಿರಿ.

ಮಂತ್ರಿ: ಅಪ್ಪಣೆ ಪ್ರಭು.

ಜಗತ್ಸಿಂಹ: [ತನ್ನಲ್ಲೆ] ಮಾನಸಿಂಹ! ಎಲಾ ರಣಹೇಡಿ! ಸ್ವಸಾಮರ್ಥ್ಯದಿಂದ ಶತ್ರುಗಳನ್ನು ಎದುರಿಸಲಾರದೆ ಮಹಾರಾಷ್ಟ್ರಾಧಿಪತಿಯ ಬೆಂಬಲದಲ್ಲಿ ಬಾಳುತ್ತಿರುವ ಪರಪುಷ್ಟ! ನಿನಗೂ ಕೃಷ್ಣಾಕುಮಾರಿಯನ್ನು ವರಿಸುವ ಹಂಬಲವೆ ?

* * * *

[ಜೋಧಪುರದ ಅರಮನೆಯ ರಸ್ತೆ ....... ಕುದುರೆಯ ಖುರಪುಟ ಧ್ವನಿ.......ಯೋಧನೊಬ್ಬ ಓಡಿಬಂದ.......]

ದ್ವಾರಪಾಲಕ: ಪ್ರಭುಗಳೇ, ಗೂಢಚಾರನೊಬ್ಬ ತಮ್ಮನ್ನು ಕಾಣಲು ಬಂದಿದ್ದಾನೆ.

ಮಾನಸಿಂಹ: ಒಳಗೆ ಬರಮಾಡು.

ಗೂಢಚಾರ: ಜೋಧಪುರ ಸಂಸ್ಥಾನಾಧೀಶ ಮಾನಸಿಂಹ ಮಹಾರಾಜರಿಗೆ ವಿಜಯವಾಗಲಿ!

ಮಾನಸಿಂಹ: ಬಾ ಸೇವಕ, ನೀನು ತಂದಿರುವ ಸುದ್ದಿ ಯಾವುದು ?

ಗೂಢಚಾರ: ತಾವು ಬಯಸಿದ್ದ ಕೃಷ್ಣಾಕುಮಾರಿಯನ್ನು ಪಡೆಯಲು ಜಯಪುರದ ಜಗತ್ಸಿಂಹನು, ಸಕಲ ಸನ್ನಾಹಗಳನ್ನೂ ಮಾಡುತ್ತಿದ್ದಾನೆ. ಸಂಧಾನದ ಮೂಲಕ ಸಫಲನಾಗದಿದ್ದಲ್ಲಿ ಸಂಗ್ರಾಮದಿಂದಲಾದರೂ ಸರಿಯೆ ಕೃಷ್ಣಾಕುಮಾರಿಯನ್ನು ಪಡೆಯಲು ನಿರ್ಧರಿಸಿದ್ದಾನೆ.

ಮಾನಸಿಂಹ: ಏನೆಂದೆ ? ಕೃಷ್ಣಾಕುಮಾರಿಯನ್ನು ಪಡೆಯಲು ಜಗತ್ಸಿಂಹ ಸನ್ನಾಹ ನಡೆಸುತ್ತಿದ್ದಾನೆಯೆ ? ಸಾಧ್ಯವಿಲ್ಲ........ ಈ ಜೋಧಪುರದ ಮಾನಸಿಂಹ ಜೀವ ದಿಂದಿರುವ ವರೆಗಂತೂ ಸಾಧ್ಯವಿಲ್ಲ. ಆವಿಷಯ ಹಾಗಿರಲಿ ನೀನಿನ್ನು ಹೋಗಿ ಮಂತ್ರಿಗಳನ್ನು ಬರಮಾಡು.

ಗೂಢಚಾರ: ಅಪ್ಪಣೆ ಮಹಾಪ್ರಭೋ.

ಮಾನಸಿಂಹ: [ತನ್ನಲ್ಲೇ] ಕೃಷ್ಣಾಕುಮಾರೀ, ನನ್ನ ಪ್ರೇಮ ದೇವತೆಯೇ, ನಮ್ಮ ನಿರ್ಮಲ ಪ್ರೇಮಕ್ಕೆ ಭಂಗ ತರಲು ಹೊಂಚು ನಡೆಸುತ್ತಿರುವ ಜಗತ್ಸಿಂಹನ ವ್ಯರ್ಥ ಪ್ರಯತ್ನವನ್ನು ನೀನೂ ಕೇಳಿರಬಹುದು. ಇರಲಿ! ಮುಂದೆ ಅಡಿಯಿಡಲಿ ಆ ಜಗತ್ಸಿಂಹ ! ಅಂದೇ ಅವನ ಆಯುಷ್ಯ ತೀರಿದಂತೆ !

[ಮಂತ್ರಿಯ ಪ್ರವೇಶ]

ಮಂತ್ರಿ: ಮಾನಸಿಂಹ ಮಹಾರಾಜರಿಗೆ ವಿಜಯವಾಗಲಿ !

ಮಾನಸಿಂಹ: ಬನ್ನಿ ಮಂತ್ರಿಗಳೇ. ಅತ್ಯವಸರದಲ್ಲಿ ನಾವೀಗ ಒಂದು ಕಾರ್ಯವನ್ನು ಕೈಗೊಳ್ಳಬೇಕಾಗಿದೆ. ತಡಮಾಡಿದರೆ ಕಾರ್ಯ ಕೈಮಿಂಚಿ ಹೋಗಲೂಬಹುದು. ಕೃಷ್ಣಾಕುಮಾರಿಯನ್ನು ಈ ಸಂಸ್ಥಾನದ ಮಹಾರಾಣಿಯನ್ನಾಗಿ ಮಾಡಲು ಉದಯಪುರದ ಭೀಮಸಿಂಹ ಮಹಾರಾಜ ಒಪ್ಪಿದರೆ ಸರಿ, ಇಲ್ಲದಿದ್ದಲ್ಲಿ ಯುದ್ಧ ! ಹಾಗೆಂದು ಇಂದೇ ಒಂದು ರಾಯಸವನ್ನು ಕಳುಹಿಸಿರಿ.

ಮಂತ್ರಿ: ಆಗಬಹುದು ಪ್ರಭು.

o o o o o o

[ಉದಯಪುರದ ಅರಮನೆ. ನಡುರಾತ್ರಿ ದಾಟದೆ. ಕೃಷ್ಣಾಕುಮಾರಿಯ ಶಯನಾಗಾರದಲ್ಲಿ ಒಂದು ಸಣ್ಣ ದೀಪದ ಬೆಳಕು ಅಸ್ಪಷ್ಟವಾಗಿ ಹರಡಿದೆ. ರಹಸ್ಯವಾಗಿ ಶಯನಾಗಾರವನ್ನು ಹೊಕ್ಕು ಬಲೇಂದ್ರಸಿಂಹ (ಕೃಷ್ಣಾಕುಮಾರಿಯ ಚಿಕ್ಕಪ್ಪ) ಒರೆಯಿಂದ ಕತ್ತಿಯನ್ನೆಳೆಯುತ್ತಾನೆ. ಕೃಷ್ಣಾಕುಮಾರಿ ನಿದ್ದೆ ಮಾಡುತ್ತಿರುವುದಿಲ್ಲ; ಆಗ ಕಿಟಾರನೆ ಕಿರುಚಿಕೊಳ್ಳುತ್ತಾಳೆ]

[ಕತ್ತಿ ಕೆಳಗೆ ಬೀಳುತ್ತದೆ]

ಬಲೇಂದ್ರ ಸಿಂಹ: ಮಗಳೆ ಕೃಷ್ಣಾ, ಈ ಪಾಪಿಯನ್ನು ಕ್ಷಮಿಸು.

ಕೃಷ್ಣಾಕುಮಾರಿ: [ಧ್ವನಿಯನ್ನು ಗುರ್ತಿಸಿ] ಯಾರು ಚಿಕ್ಕಪ್ಪಾಜೀ ನೀವೇ ನನ್ನನ್ನು ಕೊಲ್ಲಲು ಬಂದಿರಾ ಚಿಕ್ಕಪ್ಪಾಜೀ ?

ಬಲೇಂದ್ರಸಿಂಹ: ಮಗೂ ಕೃಷ್ಣಾಕುಮಾರಿ; ಒಂದೇ ಕ್ಷಣದಲ್ಲಿ ಮಹಾಪಾಪ ಕೂಪದಲ್ಲಿ ಬೀಳುತ್ತಿದ್ದ ನಿನ್ನ ಚಿಕ್ಕಪ್ಪ. ನೀನು ಎಚ್ಚರಗೊಂಡೆ, ನಾನು ಉಳಿದೆ.

ಕೃಷ್ಣಾಕುಮಾರಿ: ನಾನು ಮಾಡಿದ ವಧಾರ್ಹವಾದ ತಪ್ಪಾದರೂ ಯಾವುದು ಹೇಳಿ ಚಿಕ್ಕಪ್ಪಾಜೀ.

ಬಲೇಂದ್ರಸಿಂಹ: ತಪ್ಪಾವುದು ಎಂದು ನನಗೆ ತಿಳಿಯದು. ಕೊಲ್ಲಲು ಬಂದೆ ಅಣ್ಣನಿಗಾಗಿ. ಕೊಲ್ಲುವುದಿಲ್ಲ ನಿನಗಾಗಿ.

ಕೃಷ್ಣಾಕುಮಾರಿ: ಅಂದರೆ ?

ಬಲೇಂದ್ರಸಿಂಹ: ಓ ! ನನಗೆ ಈ ಅರಮನೆಯ ಸಹವಾಸವೇ ಬೇಡ. ಎಲ್ಲಿಯಾದರೂ ಹೋಗಿ ಸಾಮಾನ್ಯ ಪ್ರಜೆಯಂತೆ ಜೀವಿಸುತ್ತೇನೆ.

ಕೃಷ್ಣಾ: ಬಿಡಿಸಿ ಹೇಳಿ ಚಿಕ್ಕಪ್ಪಾಜೀ............ ನನಗೊಂದೂ ಅರ್ಥವಾಗುತ್ತಿಲ್ಲವಲ್ಲ !

ಬಲೇಂದ್ರಸಿಂಹ: ಅದನ್ನು ನಿನ್ನ ತಂದೆಯಿದಲೇ ಕೇಳಿ ತಿಳಿದುಕೊ. ನನ್ನನ್ನು ಈ ಘೋರ ಕೃತ್ಯಕ್ಕೆ ಬಲವಂತ ಮಾಡಿದುದು ಸಾಲದೆಂದ ಹಿಂಬಾಲಿಸಿಕೊಂಡು ಬೇರೆ ಬರುತ್ತಿರುವ ಆ ನಿನ್ನ ತಂದೆಯನ್ನೇ ಕೇಳು. ನಾನು ಇಲ್ಲಿಂದ ಮರೆಯಾಗಿ ಓಡಿ ಹೋಗುತ್ತೇನೆ. ಈ ಅರಮನೆಯನ್ನು ದಾಟಿ........ ದೂರ........ ಬಹುದೂರಕ್ಕೆ.... ಭೂಮಿಯ ಅಂಚು ಸಿಕ್ಕುವವರೆಗೂ ಓಡಿ ಹೋಗುತ್ತೇನೆ. ಇದು ಅರಮನೆಯಲ್ಲ ಸೆರೆಮನೆ...... ಕಟುಕರ ಮನೆ...........

[ಓಡುವನು]

[ಭೀಮಸಿಂಹನ ಪ್ರವೇಶ]

ಕೃಷ್ಣಾಕುಮಾರಿ: ಅಪ್ಪಾಜೀ !

ಭೀಮಸಿಂಹ: ............

ಕೃಷ್ಣಾಕುಮಾರಿ: ಅಪ್ಪಾಜೀ !

ಭೀಮಸಿಂಹ: ನೀನಿನ್ನೂ ಬದುಕಿರುವೆಯಾ ?

ಕೃಷ್ಣಾಕುಮಾರಿ: ಅಪ್ಪಾಜೀ! ಮಗೂ, ಕೃಷ್ಣೇ ಎಂದು ವಾತ್ಸಲ್ಯದಿಂದ ಕರೆಯುತ್ತಿದ್ದ ತಂದೇ ಹೀಗೇಕೆ ಮಾತನಾಡುತ್ತಿದ್ದೀರಿ ?

ಭೀಮಸಿಂಹ: ನೀನೀಗ ನನ್ನ ಮುದ್ದಿನ ಮಗಳಲ್ಲ. ಉದಯಪುರದ ಸಂಸ್ಥಾನದ ಮಹಾಮಾರಿ.

ಕೃಷ್ಣಾಕುಮಾರಿ: ಅಪ್ಪಾಜೀ ಸ್ಪಷ್ಟವಾಗಿ ಹೇಳಿ. ನನ್ನಿಂದ ಉಂಟಾದ ವಿಪತ್ತಾದರೂ ಯಾವುದು ಎನ್ನುವುದನ್ನು.

ಭೀಮಸಿಂಹ: ವಿಪತ್ತು ? ಸಾಧಾರಣ ವಿಪತ್ತಲ್ಲ. ಉದಯಪುರದ ಸಿಂಹಾಸನವನ್ನು ಉರುಳಿಸಿ, ಉದಯ ಪುರದ ಪ್ರಜಾಕೋಟಿಯ ರಕ್ತದ ರುಚಿ ನೋಡಲು ಬಂದ ಮೃತ್ಯು ದೇವತೆ ನೀನು.

ಕೃಷ್ಣಾ: ಅಯ್ಯೋ ದೈವವೇ! ಬಾಲ್ಯದಿಂದ ನನ್ನನ್ನು ಉದಯಪುರದ ಬೆಳಕೇ ಎಂದು ಲಾಲಿಸಿ ಪಾಲಿಸಿ ಆನಂದಿಸಿದ್ದ ತಂದೆಯಿಂದಲೇ ಈ ಮಾತುಗಳನ್ನು ಕೇಳಬೇಕಾಯಿತೇ ? ಅಯ್ಯೋ ವಿಧಿಯೇ.

ಭೀಮ: ಹೌದು ನೀನಂದು ಉದಯಪುರಕ್ಕೆ ಬೆಳಕಾಗಿದ್ದೆ. ಇಂದು ಕಾರ್ಗಾಲದ ರಾತ್ರಿ. ಅಂದು ನನ್ನ ಮಮತೆಯ ಸುಳಿ. ಇಂದು ನನ್ನನ್ನು ದಹಿಸಲು ಬಂದ ಭೀಕರ ಜ್ವಾಲೆ !

ಕೃಷ್ಣಾಕುಮಾರಿ: ಅಯ್ಯೋ ವಿಧಿಯೇ ! ನಾನೆಂತಹ ನಿರ್ಭಾಗ್ಯೆ ! ಪಡೆದ ತಂದೆಯಿಂದ ಕೇಳಿಬರಬಹುದಾದ ಮಾತುಗಳೇ ಇವು ? ........ ಅಪ್ಪಾಜೀ ನನ್ನಿಂದ ತಮಗೊದಗಿರುವ ಕೇಡಾದರೂ ಯಾವುದು ಎನ್ನುವುದನ್ನು ತಿಳಿಸುವ ಕೃಪೆ ಮಾಡುತ್ತೀರಾ ?

ಭೀಮಸಿಂಹ: ಕೇಡು ! ನಿನ್ನಿಂದ ಅಲ್ಲ.

ಕೃಷ್ಣಾಕುಮಾರಿ: ಮತ್ತೆ !

ಭೀಮಸಿಂಹ: ನಿನ್ನ ಸೌಂದರ್ಯದಿಂದ.

ಕೃಷ್ಣಾ: ನನಗರ್ಥವಾಗದ ಮಾತುಗಳಿವು. ಸರಿಯಾಗಿ ಹೇಳಿ.

ಭೀಮಸಿಂಹ: ಕೃಷ್ಣೇ, ನಿನ್ನ ತಾಯಿ ಅಹಲ್ಯಾದೇವಿಯೂ ನಾನು ಹೆಮ್ಮೆಪಟ್ಟುಕೊಂಡದ್ದುಂಟು. ಅನುಪಮ ಸುಂದರಿಯ ಜನನಿ ಜನಕರು ನಾವು ಎಂದು. ಅದು ಅಂದು. ಇಂದು — ಈ ನಿನ್ನ ಸೌಂದರ್ಯವೇ ಶತ್ರುಗಳನ್ನು ಉದಯಪುರಕ್ಕೆ ಮುತ್ತಿಗೆ ಹಾಕುವಂತೆ ಪ್ರೇರೇಪಿಸುತ್ತಿದೆ.

ಕೃಷ್ಣಾಕುಮಾರಿ: ನನ್ನ ಸೌಂದರ್ಯ, ಉದಯಪುರಕ್ಕೆ ಶತ್ರುಗಳು ಮುತ್ತಿಗೆ ಹಾಕುವಂತೆ ಮಾಡಿದೆಯೇ ?

ಭೀಮಸಿಂಹ: ಇಲ್ಲ. ಇನ್ನೂ ಮುತ್ತಿಗೆ ಹಾಕಿಲ್ಲ. ಆದರೆ ಆ ದಿನಗಳು ದೂರವಿಲ್ಲ. ಒಬ್ಬರಲ್ಲ. ಇಬ್ಬರು. ಏಕ ಕಾಲದಲ್ಲಿ ಎರಡು ಕಡೆಯಿಂದಲೂ ರಾಯಸಗಳು !

ಕೃಷ್ಣಾ: ಯಾರು ಆ ಇಬ್ಬರು ?

ಭೀಮಸಿಂಹ: ಜಯಪುರದ ಜಗತ್ಸಿಂಹನ ರಾಯಸ. ಜೋಧಪುರದ ಮಾನಸಿಂಹನ ರಾಯಸ. ಕೃಷ್ಣಾಕುಮಾರಿಯನ್ನು ಕೊಡಲೊಪ್ಪದಿದ್ದರೆ ಭೀಮಸಿಂಹನ ಮೇಲೆ ಯುದ್ಧ ! ತಿಳಿಯಿತೆ ಆ ಇಬ್ಬರಾರು ಎಂದು ?

ಕೃಷ್ಣಾಕುಮಾರಿ: ಇಷ್ಟೇ ತಾನೆ ? ಇಷ್ಟವಿದ್ದವನೊಡನೆ ಬಾಂಧವ್ಯ ಬೆಳಸುವುದು........ ಬೇಡವೆನಿಸಿದವನೊಡನೆ ಯುದ್ಧ !

ಭೀಮಸಿಂಹ: ಯುದ್ಧ ಮಾಡುವುದು ನೀನಲ್ಲವಲ್ಲ. ಹೋರಾಡುವವರಿಗಲ್ಲವೇ ಪಾಡು ?

ಕೃಷ್ಣಾ: ಸಂದರ್ಭ ಬಂದರೆ ಹೋರಾಡುತ್ತೇನೆ.

ಭೀಮಸಿಂಹ: ಬೇಡ. ಯುದ್ಧರಂಗದಲ್ಲಿ ಹೋರಾಡಿ ಗೆಲ್ಲಬಹುದಾಗಿತ್ತು. ಇಲ್ಲವೇ ಮಡಿಯಬಹುದಾಗಿತ್ತು. ರಾಜಕುಮಾರನಾಗಿದ್ದಿದ್ದರೆ .... .... ಆದರೆ .... .... ನೀನು, ರಾಜಕುಮಾರಿ. ನೀನಾಗಿಯೇ ಮಡಿಯಲು ನಿನಗೆ ಅದಕ್ಕಿಂತಲೂ ಸುಲಭವಾದ ಮಾರ್ಗವಿದೆ.

ಕೃಷ್ಣಾಕುಮಾರಿ: ಯಾವುದು ?

ಭೀಮಸಿಂಹ: ವಿಷಪಾನ ! ವಿಷ ಸೇವಿಸಿ ನೀನು ಕಣ್ಣು ಮುಚ್ಚಿದರೆ ಸಾಕು. ಯುದ್ಧಕ್ಕೆ ಬರುವುದನ್ನು ಅವರೇ ನಿಲ್ಲಿಸುತ್ತಾರೆ.

ಕೃಷ್ಣಾ: ವಿಷ ! ಕರುಳಿನ ಕಂದನಿಗೆ ವಿಷಉಡಿಸಿದ ಇತಿಹಾಸ ಈ ರಜಪೂತ ವಂಶದಲ್ಲಿಲ್ಲ. ಕ್ಷಾತ್ರ ತೇಜಸ್ಸಿಗೆ ಕಳಂಕ ತರುವ ಮಾತುಗಳು. ಅಪ್ಪಾಜೀ ನನ್ನ ಅಂತ್ಯ ಗೊಂಡ ಬಳಿಕವೂ ಯುದ್ಧ ಸಂಘಟಿಸಲಾರದು ಎನ್ನುವ ನಂಬಿಕೆ ನಿಮಗಿದೆಯೆ ?

ಭೀಮಸಿಂಹ: ಹೆಣವನ್ನು ಹೂಳಿದ ಮೇಲೆ ಹದ್ದು ಗಳು ಹಾರಾಡುವುದುಂಟೆ ?

ಕೃಷ್ಣಾ: ಹೀನೋಪಮೆ ! ಹೇಡಿಯ ಮಾತುಗಳು! ಹೇ ಉದಯಪುರದ ರಾಜ್ಯಲಕ್ಷ್ಮೀ ಎಂತಹ ದೌರ್ಭಾಗ್ಯ ಇದು ? ರಜಪೂತ ವಂಶದಲ್ಲಿ ಜನಿಸಿದ ಭೀಮಸಿಂಹ ಮಹಾರಾಜರಿಂದ ಇಂತಹ ಮಾತುಗಳೇ ? ಅಪ್ಪಾಜೀ ? ಇತಿಹಾಸದ ಪುಟಗಳು........ ನಿಮ್ಮನ್ನು ಕುರಿತು........

ಉದಯಪುರದ ಅಸ್ತಮಾನ ಸೂರ್ಯ ಭೀಮ ಸಿಂಹ ರಜಪೂತ ವಂಶಕ್ಕೆ ಕೊಡಲಿಯಾದ ಭೀಮ ಸಿಂಹ........ ರಣವಿಕ್ರಮರ ವಂಶದ ರಣಹೇಡಿ !

ಕರುಳಿನ ಕಂದನಿಗೆ ಕಾಳಕೂಟವೆರೆದ ಹೃದಯ ಹೀನ ! ಎಂದು ನಿಮ್ಮನ್ನೊಂದು ಕಳಂಕ ಪಾತ್ರವಾಗಿ ಉಲ್ಲೇಖಿಸುವ ಮುನ್ನ........ ಒಮ್ಮೆ ಆಲೋಚಿಸಿ ನೋಡಿ........

ಭೀಮಸಿಂಹ: ಚೆನ್ನಾಗಿ ಆಲೋಚಿಸಿಯೇ ತಿರ್ಮಾ ನಿಸಿದ್ದು. ಬಲೇಂದ್ರನಿಗೆ ಆಜ್ಞಾಪಿಸಿದುದು ಕೃಷ್ಣೆಯನ್ನು ಕೊಂದು ಬಾ ಎಂದು.

ಕೃಷ್ಣಾಕುಮಾರಿ: ಚಿಕ್ಕಪ್ಪಾಜಿ ಕೊಲ್ಲುವುದಕ್ಕೆಂದೇ ಬಂದರು. ಆದರೆ ಕೊಲ್ಲಲಿಲ್ಲ......... ಅಪ್ಪಾಜೀ ನಾನು ಸಾಯಲೇ ಬೇಕೆ ?

ಭೀಮಸಿಂಹ: ನೀನಾಗಿಯೇ ಕಣ್ಣು ಮುಚ್ಚಿದರೆ ಮತ್ತೂ ಒಳ್ಳೆಯದು.

ಕೃಷ್ಣಾ: ಸಾಯದಿದ್ದರೆ ?

ಭೀಮಸಿಂಹ: ಸಾಯಿಸಬೇಕಾಗುತ್ತದೆ.

ಕೃಷ್ಣಾಕುಮಾರಿ: ನಿಜವೇ ?

ಭೀಮಸಿಂಹ: ಸಂಶಯವೇ ಇಲ್ಲ !

ಕೃಷ್ಣಾಕುಮಾರಿ: ಧನ್ಯಳಾದೆ ಅಪ್ಪಾಜೀ ! ಮಗಳ ಸಾವಿನಿಂದ ತಂದೆಗೆ ಸಂತೃಪ್ತಿ ದೊರೆಯುವಲ್ಲಿ ನನಗೆ ಅದಕ್ಕಿಂತ ಬೇರೆ ಇದೆಯೆ ? ಸಂತೋಷದಿಂದ ಸಾವನ್ನು ಪ್ಪುತ್ತೇನೆ. ನನಗಾಗಿ ಆ ಒಂದು ಕೆಲಸ ಮಾಡುವಿರಿ ತಾನೆ?

ಭೀಮಸಿಂಹ: ನಿನ್ನ ಸಾವಿನ ವಿಷಯದಲ್ಲಾದರೆ ಎಂತಹ ಕೆಲಸವನ್ನಾದರೂ ಮಾಡಲು ಸಿದ್ಧನಿದ್ದೇನೆ.

ಕೃಷ್ಣಾಕುಮಾರಿ: ನನ್ನ ಪೂಜಾ ಸಮಯಕ್ಕೆ ಸರಿ ಯಾಗಿ ಒಂದು ಬಟ್ಟಲಿನಲ್ಲಿ ವಿಷ ಕಳುಹಿಸಿ ಕೊಟ್ಟರೆ ಸಾಕು.

ಭೀಮಸಿಂಹ: ಇಷ್ಟೇ ತಾನೆ ? ಒಂದಲ್ಲದಿದ್ದರೆ ನಾಲ್ಕು ಬಟ್ಟಲನ್ನು ಕಳುಹಿಸಿ ಕೊಡುತ್ತೇನೆ.

ಕೃಷ್ಣಾಕುಮಾರಿ: ಕೃತಾರ್ಥಳಾದೆ ತಂದೆ ........... ನನ್ನನ್ನು ಬೀಳ್ಕೊಡಿ.

[ಹೋಗುವನು]

ಹೇ ಉದಯಪುರ ರಾಜ್ಯ ಲಕ್ಷ್ಮೀ...... ಏನಿದು ನಿನ್ನ ದೌರ್ಭಾಗ್ಯ ವೀರಾದಿ ವೀರರಿಗೆ ಜನ್ಮವನ್ನಿತ್ತ. ವೀರ ಜನನೀ ಈ ರಣ ಹೇಡಿಗೆ ಜನ್ಮವಿತ್ತೆಯೇಕೆ ? ನಾನು ಹೆಣ್ಣಾಗಿ ಜನಿಸುವುದರ ಬದಲು ಗಂಡಾಗಿ ಜನಿಸಿದ್ದಿದ್ದರೆ...... ಓ ! ಕೃಷ್ಣಾಕುಮಾರಿಯ ಸೌಂದರ್ಯವೆ ? ವಿಷಕೆ ಔತಣವಾಯ್ತು ಈ

[ಪರಿಚಾರಿಕೆಯೊಬ್ಬಳು ವಿಷದ ಬಟ್ಟಲನ್ನು ತಂದು; ನಡುಗುವ ಕೈಗಳಿಂದ ತಗ್ಗಿದ ಧ್ವನಿಯಿಂದ;]

ಪರಿಚಾರಿಕೆ: ಅಮ್ಮಾ ಇದನ್ನು ಮಹಾರಾಜರು ಕಳುಹಿಸಿಕೊಟ್ಟಿದ್ದಾರೆ.

ಕೃಷ್ಣಾಕುಮಾರಿ: [ತೆಗೆದುಕೊಂಡು] ನೀನಿನ್ನು ಹೋಗಬಹುದು.

ಹೋಗುವಳು]

ಹೇ ಪರಮೇಶ್ವರಾ ! ಏನಿದು ನಿನ್ನ ಲೀಲೆ ? ನನಗೆ ನಿನ್ನ ಪದತಲದಲ್ಲಿ ಸಾನಿಧ್ಯವನ್ನೊದಗಿಸಿಕೊಡ-ದೇವಾ !

[ಭಾವ ಪರವಶಳಾಗಿ] ಓ ! ರಜಪೂತ ವಂಶವೆ ! ವೀರಾದಿ ವೀರರು ಜನಿಸಿ ಮೆರೆದ ಉದಯಪುರ ಸಂಸ್ಥಾನವೆ! ಕಣ್ಮರೆಯಾದ ಕ್ಷಾತ್ರ ತೇಜಸ್ಸೇ ನಿಮಗೆಲ್ಲ ಏನಾಯಿತು ? ಕಗ್ಗತ್ತಲೆ ಕವಿಯಿತೇ ಉದಯಪುರಕ್ಕೆ ?

ಬಾ ವಿಷವೆ ಚುಂಬಿಸುವೆ. ನನ್ನನ್ನಾಲಂಗಿಸಿಕೊ ನಿನ್ನ ಕಾಳ ಹಸ್ತಗಳಿಂದ........ ಓ ನನ್ನ ಯೌವ್ವನವೆ ? ನನ್ನ ಜನ್ಮ ಭೂಮಿಯೆ ಓ ನನ್ನ ಉದಯಪುರ ಬಂಧು ಗಳೇ........ ನನ್ನ ಗೆಳತಿಯರೇ.... ಬೀಳ್ಕೊಡಿ.... ಕಾಳ ಕೂಟವನುಣುವ ನತದೃಷ್ಟೆ ಕೃಷ್ಣೆಯನು.... ಉದಯ ಪುರದೇವತೆಯೆ ನೀಡೆನಗೆ ನಿನ್ನುದರದಲಿ ಗಂಡು ಜನ್ಮ ವನು........

[ವಿಷವನ್ನು ಕುಡಿದು ಬಿಕ್ಕಳಿಸುವಳು]

‡ ‡ ‡ ‡ ‡

ದ್ವಾರಪಾಲಕ: [ಓಡಿ ಬಂದು ಗಾಬರಿಯಿಂದ] ಮಹಾ ರಾಣಿ ಅಹಲ್ಯಾದೇವಿಯವರು ....

ಭೀಮಸಿಂಹ: ಏನು ?

ದ್ವಾರಪಾಲಕ: ಮಹಾರಾಜರು ಕೃಷ್ಣಾಕುಮಾರಿಗೆ ವಿಷ ಕುಡಿಸಿ ಕೊಂದದ್ದನ್ನು ತಿಳಿದು ಮಹಾರಾಣಿಯವರೂ ಅಸು ನೀಗಿದರು.

ಭೀಮಸಿಂಹ: [ಗದ್ಗದ ಸ್ವರದಲ್ಲಿ] ನನ್ನ ಜೀವಿತೇಶ್ವರಿ ಅಹಲ್ಯಾ........ ನನ್ನನ್ನು ಕೈಬಿಟ್ಟು ಹೋದೆಯಾ? ಮಗಳನ್ನು ವಿಷವಿಕ್ಕಿ ಕೊಂದ ಪಾಪಿಯನ್ನು ನೋಡಬಾರದೆಂದು ಕಣ್ಣುಮುಚ್ಚಿದೆಯಾ ? (ಅಳುತ್ತ) ಅಯ್ಯೋ ವಿಧಿಯೇ........ ಮಗಳನ್ನು ನಾನಾಗಿ ಕೊಂದೆ.... ಮಡದಿ ತಾನಾಗಿ ಕೈಬಿಟ್ಟು ಹೋದಳು........ ಇನ್ನು ರಾಜ್ಯ ? ಅದು ಉಳಿಯುವುದುಂಟೆ ? ಆಮೇಲೆ ನಾನು ? ........ ನಾನೂ ಹೋಗುತ್ತೇನೆ........ ಸ್ವರ್ಗಕ್ಕಲ್ಲ, ನನಗಾಗಿಯೇ ನಿರ್ಮಾಣಗೊಳ್ಳುತ್ತಿರುವ ನರಕಕ್ಕೆ.... ಮಗಳೇ ಕೃಷ್ಣಾ ನನ್ನನ್ನು ಕ್ಷಮಿಸುವೆಯಾ ಮಗೂ.... ಅಯ್ಯೋ ನನ್ನ ಹೆಸರು ಭೀಮಸಿಂಹ.... ಆದರೆ ನಾನು ?[ಅಳುವನು]

[ಮುಗಿಯಿತು]

**ಆಧಾರ ಗ್ರಂಥಗಳು:**


1) ಆರ್ಯಕೀರ್ತಿ, —ಶ್ರೀ. ಚ. ವಾಸುದೇವಯ್ಯ.
2) ಕೃಷ್ಣಾಕುಮಾರಿ, —ಶ್ರೀ ಬೆನಗಲ್ ರಾಮರಾವ್, (ನಾಟಕ)
3) ಕೃಷ್ಣಾಕುಮಾರಿ ಮತ್ತು ಹಾಡುಪಾಡು, —ಶ್ರೀ ದ. ರಾ. ಬೇಂದ್ರೆ.
4) ಕೃಷ್ಣಾಕುಮಾರಿ, —ಶ್ರೀ ಸೇಡಿಯಾಪು ಕೃಷ್ಣಭಟ್ಟ.




# ಶರಣರ ಅನುಭಾವಮಾರ್ಗ; ವೈವಿಧ್ಯದಲ್ಲಿ ಏಕತೆ

— ವಿ. ಸಿ. ಮಂಡಿ.

"ಶಿವಾನುಭವ", "ಶಿವಯೋಗ" ಇವನ್ನು ಸಮನ್ವಯ ಮಾರ್ಗವೆಂದು ಕರೆಯುವದುಂಟು. ವೀರಶೈವ ಮಹಾ ಪಂಡಿತರಷ್ಟೇ ಅಲ್ಲ, ಬೇರೆ ಪಂಥದವರೂ ಸಹ ಇದು ಆಚರಣೆಗೆ ಸಹಜ-ಸುಲಭ, ಮೇಲು ಕೀಳೆನ್ನದೆ ಎಲ್ಲರೂ ಅನುಸರಿಸುವ ಮಾರ್ಗ. ಇದರಲ್ಲಿ ಕೇವಲ ಜ್ಞಾನಮಾರ್ಗ, ಕರ್ಮಮಾರ್ಗ ಅಥವಾ "ಹಠಯೋಗಕ್ಕೆ" ಮಹತ್ವವಿಲ್ಲ. ಅನೇಕ ಶಿವಶರಣರು ಹೇಳುವ ಹಾಗೆ ಶೀವಯೋಗಿ 'ಬಳಸಿ ಬ್ರಹ್ಮಚಾರಿ' ಅಂದರೆ ಅವನ್ನು ಶರಣ ಸತಿ ಲಿಂಗಪತಿಯಾಗಿ ಆಚರಿಸವುದರಿಂದ ನಿಷ್ಕಾಮಿ ಎನ್ನಲಾಗದು; ಸರ್ವ ವ್ಯಾಪಾರವನ್ನು ನಿರಪೇಕ್ಷ ಭಾವದಿಂದ 'ಪರದೈವ' ಅಥವಾ ಸರ್ವಕರ್ತನಾದ "ಪರಮಾತ್ಮನಿಗೆ" ಅರ್ಪಿಸಿ ಮಾಡುವುದರಿಂದ ಅವನು ಅಷ್ಟನುದ ವಿರಹಿತವೆನ್ನಲಾಗದು, ಆದರೂ ಸಾಮಾನ್ಯರಂತೆ ಅವನಲ್ಲ." ಬಸವಣ್ಣ ತಮ್ಮ ವಚನದಲ್ಲಿ "ಛಲಬೇಕು ಶರಣಂಗೆ ಪರ ಧನವನೊಲ್ಲೆಂದು, ಪರಸತಿಯನೊಲ್ಲೆಂದು' ಎಂಬುದು ಶಿವ-ಶರಣರು ಇಷ್ಟು ಮಾತ್ರಕ್ಕೆ 'ಹಠಯೋಗಿ' ಗಳಾಗಿದ್ದರು. ಅವರು 'ಕರ್ಮ ' ಮಾರ್ಗವನ್ನೂ ಒಪ್ಪುವುದಿಲ್ಲ; ಆದರೆ ಸುಖ-ದುಃಖಗಳನ್ನು ದೇವನಿಗರ್ಪಿಸಿ ನಡೆಯುವ ವಿಧಾನ ಆಶ್ಚರ್ಯವಾದುದು. ಮಾನ್ಯ ಆರ್. ಆರ್. ದಿವಾಕರ ಅವರು ಎಂ. ಆರ್. ಶ್ರೀನಿವಾಸ ಮೂರ್ತಿಗಳು, ತಮ್ಮ ಗ್ರಂಥಗಳಲ್ಲಿ ಇವೆಲ್ಲವುಗಳ ಬಗ್ಗೆ ದೀರ್ಘಚರ್ಚಿಸಿ 'ಸಮನ್ವಯ' ಮಾರ್ಗ ಅಥವಾ 'ಶಿವಯೋಗ' ಸರ್ವಶ್ರೇಷ್ಠ ಎಂಬ ತೀರ್ಮಾನಕ್ಕೆ ಬಂದರು.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಶಿವ-ಶರಣರ ವಚನಗಳೆಂಬ, ಹುದುಗಿದ ನಿಧಿಯನ್ನು, ಹೊರತೆಗೆದ ಶ್ರೇಯಸ್ಸು ದಿ॥ ವಚನಶಾಸ್ತ್ರ ಪಿತಾಮಹ ಫ. ಗು. ಹಳಕಟ್ಟಿಯವರಿಗೆ. ಇವರ ಜೊತೆ ನೂರಾರು ಜನರೂ ಹಾಗೂ ಅನೇಕ ಮಠಾಧಿಪತಿಗಳವರ ಪ್ರಯತ್ನದ ಪಾಲೂ ಸೇರುತ್ತದೆ. ಹಳಕಟ್ಟಿಯವರದು ತಾಪೋಲೆ ಪತ್ರಗಳನ್ನು ಶೋಧನೆ ಅವನ್ನು ಬೆಳಕಿಗೆ ತಂದ ಶ್ರೇಯಸ್ಸಾದರೆ, ಲಿಂ. ಅಭಿನವಾಲ್ಲನು ಶ್ರೀ ಮಹದೇವಸ್ವಾಮಿಗಳು, ಸರ್ಪಭೂಷಣ ಮಠ, ಬೆಂಗಳೂರು, ಅವರು ತಮ್ಮ ಅಸ್ಖಲಿತ ವಾಣಿಯಿಂದ ಜನರಲ್ಲಿ ಧರ್ಮ ಜಾಗ್ರತಿಮಾಡಿದ್ದು.

ಮೇಲು-ಕೀಳೆಂಬ ಬೇರನ್ನೇ 12ನೇ ಶತಮಾನದಲ್ಲಿ ಕಿತ್ತೊಗೆದ ಶಿವ-ಶರಣರ ಅನುಯಾಯಿಗಳಾದ ನಮ್ಮಲ್ಲಿ 8 ಶತಮಾನಗಳು ಕಳೆದರೂ ಇನ್ನೂ ಬೇರೂರಿರುವದು ಅತೀವ ವಿಷಾದ ಸಂಗತಿಯನ್ನು ನಾವು ಕಾಣುವದು ಜಂಗಮ ಭಕ್ತರಲ್ಲಿ ಮೇಲು ಕೀಳೆಂಬ, ಅಷ್ಟೇ ಅಲ್ಲ ಗುರು-ಗುರುಗಳು, ಜಂಗಮ-ಜಂಗಮ ಭಕ್ತ-ಭಕ್ತರಲ್ಲೂ ಸಹ ಈ ವಿಷಬೇರು ಇರವುದು ತೀರ ಖೇದದ ಮಾತು. ನಿಷ್ಪಕ್ಷಪಾತದಿಂದ, ಎಲ್ಲ ಶಿವ-ಶರಣರ ವಚನ ಗ್ರಂಥ ಆಧಾರದಿಂದ, ಈ ಕೃತಕ ಕಲ್ಪನೆ ಕೇವಲ ಭ್ರಮೆ, ಅದು ತೊಲಗಿದರೆ ಆದಷ್ಟು ಶ್ರೇಯಸ್ಕರ ಎಂಬುದನ್ನು ಉದಾಹರಣೆ ಸಹಿತ ಬಿಂಬಿಸಲು ಯತ್ನಿಸಲಾಗಿದೆ. ಇದರಲ್ಲಿ ಯಾವ ವರ್ಗವನ್ನೂ ದೂಷಿಸುವ ವಿಚಾರವಿಲ್ಲ.

ನಾಲ್ಕಾರು ದಶಕಗಳಿಂದ ಗುರು-ಜಂಗಮರಲ್ಲಿ ತಾವು ಶ್ರೇಷ್ಠ ಎಂಬ ಪ್ರಚಾರ ಜೋರಾಗಿ ನಡೆದು, ಆ ಬಗ್ಗೆ ಹಲವಾರು ದೂಷಣೆ ಗ್ರಂಥಗಳು ಪ್ರಕಟವಾಗಿವೆ. ನಿಜವಾದ 'ಶಿವಯೋಗಿ' ಗುರು-ಜಂಗಮ ಅಥವಾ ಭಕ್ತನಾಗಲೀ ತಾನು ಶ್ರೇಷ್ಠ ಎಂದು ಹೇಳುತ್ತಿರಲಿಲ್ಲ. ಮಹತ್ಮಾ ಬಸವೇಶ್ವರರು "ಗುರುವಿನ ಗುರು ಪರಮಗುರು, ಜಂಗಮ

ಮೂರ್ತಿ" ಎಂದು ಹೇಳಿದ್ದಾನೆ ಅಷ್ಟೇಕೆ ಅವನ ಅವತಾರ 'ನಂದಿ' ಅವತಾರ ಎಂದು ಕರೆದರೂ ಅವನು "ತೊತ್ತಿನ ತೊತ್ತಿನ ಮುತ್ತೊತ್ತಿನ ಮಗ" ಎಂದು ಕರೆದಿದ್ದಾನೆ. ಅವನ ಭಕ್ತಿರಸಯುಕ್ತವಾದ ವಚನಗಳನ್ನು ಓದಿದರೆ ಅವನು ಗುರು ಲಿಂಗ ಜಂಗಮರಿಗೆ ಮರುಗಿದ್ದನ್ನು ನೋಡಿದರೆ ಭಕ್ತಿಯುತ ಕಣ್ಣೀರು ಧಾರಾಕಾರವಾಗಿ ತನ್ನಿಂದ ತಾನೇ ಹೊರಡುತ್ತಿವೆ. ಇದರಲ್ಲಿ ಉತ್ಪ್ರೇಕ್ಷೆ ಎನಿತಿಲ್ಲ.

ಸಾಧನ ಮಾತ್ರದಿಂದ ಅಥವಾ ಪರಿಸ್ಥಿತಿಯ ಒತ್ತಡದಿಂದ ಹಲವರು ಗುರು, ಜಂಗಮ, ಭಕ್ತರಾಗಿರಬಹುದು. ಸಪ್ತರ್ಷಿಗಳು ಕೀಳು ಕುಲದವರಾಗಿದ್ದರೂ ಅವರನ್ನು ಶ್ರೇಷ್ಠರೆಂದು ಪರಿಗಣಿಸುವದಿಲ್ಲವೋ !

## ಗುರು-ಜಂಗಮರು

ಭಕ್ತಿ ಭಾಂಢಾರಿ ಬಸವಣ್ಣ ತನ್ನ ಒಂದು ವಚನದಲ್ಲಿ "ಗುರುವಿನ ಗುರು ಜಂಗಮ" ಎಂದು ಹೇಳಿ ಮುಂದೆ "ಜಂಗಮವ ನಿಂದಿಸುವವರ, ಹಾಗೂ ಜಂಗಮವ ಬಿಟ್ಟು ಲಿಂಗ ಪೂಜಿಸುವವರನ್ನು ಖಂಡಿಸಿದ್ದಾನೆ. ಇನ್ನೂ ಹಲವಾರು ತನ್ನ ವಚನಗಳಲ್ಲಿ "ಜಂಗಮ" ಮಹತ್ವ ಪ್ರತಿಬಿಂಬಿಸಿ ಅದರಿಂದ ಜಗತ್ತು, ದೈವ ಸರ್ವಸ್ವವು ಎಂದೂ, ತನು, ಮನ, ಧನಗಳನ್ನು ಅವರಿಗೆ ಒಪ್ಪಿಸಬೇಕೆಂದೂ, 'ಜಂಗಮವ ಹರನೆಂದು ಕಂಡು ನರನೆಂದು ಭಾವಿಸಿದರೆ ನರ ತಪ್ಪದು," ಹಾಗೂ ಜಂಗಮರನ್ನು ಉತ್ತಮ ಉಧ್ಯಮ ಕನಿಷ್ಠವೆಂದು ವರ್ಗೀಕರಿಸಲಾಗದು. ಮುಂದುವರಿಯುತ್ತ ಅವನು ಭಿತ್ತಿಯಿಲ್ಲದೆ ಬರೆಯಬಹುದೆ ಚಿತ್ತಾರವ ? ಬಿತ್ತಿ ಬೆಳೆಯ ಬಹುದೆ ಧರೆಯಿಲ್ಲದೆ ? ಲಿಂಗವಿಲ್ಲದೆ ಲಿಂಗಾರ್ಚನೆಯ ಮಾಡಬಹುದೆ ?" ಎಂದು ಮರ್ಮಾಥಕವಾಗಿ ಪ್ರಶ್ನಿಸಿದ್ದಾನೆ.

ಯಾವೊಂದು ಧರ್ಮದಲ್ಲಿ, ಧರ್ಮಪ್ರಸಾರ ಹಾಗೂ ಲೌಕಿಕ ಕಾರ್ಯಗಳನ್ನು ಮುಂದುವರಿಸಲು ಪೀಠಸ್ಥರು ಬೇಕೆ ಬೇಕು. ವೀರಶೈವರಲ್ಲಿ ಗುರುವರ್ಗದವರು ಹಾಗೂ ಜಂಗಮರೆಂಬ ಎರಡು ವಿಧ ಪೀಠಸ್ಥರು ಮುಖ್ಯರು. ಗುರುವರ್ಗದವರು ಸಾಮಾಜಿಕ ಕಾರ್ಯಗಳನ್ನು ನಿರ್ವಹಿಸಿದರೆ ವಿರಕ್ತರು ಅಥವಾ ಜಂಗಮರು ಪಾರಮಾರ್ಥಿಕ ಮುಖ್ಯಸ್ಥರು. ಅವರು ತಪಸ್ವಿಗಳು ಹಾಗೂ ಗುರು-ಭಕ್ತವರ್ಗದವರಿಗೆ ಮಾರ್ಗದರ್ಶಿಗಳಾದವರಿರಬೇಕು. ಈ ಮಾತು ಬಸವೇಶ್ವರ ವಚನದಿಂದ "ಗುರುವಿನ ಗುರು ಜಂಗಮ" ಎಂಬುದು ಸ್ಪಷ್ಟ. ಹೀಗಿದ್ದರು ಗುರು-ಜಂಗಮರಲ್ಲಿ ಯಾರು ಶ್ರೇಷ್ಠ ಎಂಬ ವಾದ ಅವರಲ್ಲೇ ಭಕ್ತರಿಗಿಂತ ಹೆಚ್ಚಾಗಿ ಎದ್ದದ್ದು. ಹಲವಾರು ಶರಣರ ವಚನಗಳನ್ನು ವೀಕ್ಷಿಸಿದಾಗ ಗುರು-ಜಂಗಮ-ಭಕ್ತರಲ್ಲಿ ಭೇದವೇ ಇಲ್ಲ. ಮೂರು ಒಂದೇ ದೇಹದ ಭಾಗಗಳೆಂದರೂ ಅಡ್ಡಿಯಿಲ್ಲ, ಅದರಲ್ಲಿ ಮೇಲು-ಕೀಳೆಂಬುದಿಲ್ಲ. ಬಸವಣ್ಣನ "ಶಿವಭಕ್ತರು ಅಧಿಕರು, ಇದಕ್ಕೆ ಅಧಿಕ ಜಂಗಮವ ಕಂಡೆ, ಈ ದ್ವಿವಿಧವನೊಂದೇ ಎಂದು ನಂಬಿದೆ" ಎಂಬುವರಲ್ಲಿ ಮೇಲಿನ ಅರ್ಥ ಹೊರಡುವದು; ಹಾಗೂ "ಸಿಂಹಕ್ಕೊಲಿದ ಮದಕರಿಯಂತೆ ಆನು ಜಂಗಮಕ್ಕೊಲಿದೆನಯ್ಯಾ" ಎಂದು ತನ್ನ ದೃಢ ವಿಶ್ವಾಸವನ್ನು 'ಜಂಗಮದಲ್ಲಿ" ವ್ಯಕ್ತಪಡಿಸಿದ್ದಾನೆ. ಮುಂದುವರಿದು ಭಕ್ತರಿಗೆ ಜಂಗಮನ ಕೂಡಿಕೊಂಡು ಲಿಂಗಾರ್ಚನೆ ಮಾಡುವರು ಲೇಸು, ಜಂಗಮಕ್ಕೆ ಭಕ್ತನ ಕೂಡಿಕೊಂಡು ಲಿಂಗಾರ್ಜನೆ ಮಾಡುವರು ಲೇಸು. ಜಂಗಮದ ಕರ್ತವ್ಯ ಭಕ್ತರಿಗೆ ದಾಸೋಹ, ಭಕ್ತನ ಕಿಂಕರತ್ವ ಜಂಗಮಕ್ಕೆ ದಾಸೋಹ" ಎಂದೂ "ಈ ಎರಡು ಒಂದಾದ ತೆರನ ಉಪಮಿಸಬಾರದೆಂದು" ಹೇಳಿದ್ದಾನೆ. "ಭಕ್ತನ ಕಾಯ ಜಂಗಮ, ಜಂಗಮದ ಪ್ರಾಣ ಭಕ್ತ ಧರಿಸಿಪ್ಪ; ಇಬ್ಬರಿಗೂ ಭಕ್ತಿ ಬೇಕು" ಎಂದೂ "ಜಂಗಮ ಜ್ಞಾನರೂಪ, ಭಕ್ತ ಆಚಾರ ರೂಪ" ಎಂದು ವಿವರಿಸಿದ್ದಾನೆ.

ಪರಮಯೋಗಿ ಸಿದ್ಧರಾಮ ತನ್ನ "ಅಷ್ಟಾವರಣ ತ್ರಿವಿಧಿ"ಯಲ್ಲಿ "ಬಸವಣ್ಣ ಗುರು ಹರರೂಪ, ಲಿಂಗ ಜಂಗಮಕೆಲ್ಲ ಪ್ರಾಣವಾಗಿದ್ದ, ಜಂಗಮ ಪ್ರಾಣಿ, ಅಂಗ ಸಂಗದ ಭಾವ ಅಳಿದು ಲಿಂಗನಿಷ್ಠೆಯನ್ನು ತನ್ನಲ್ಲಿ ಮಾಡಿದ ಮಹಾನುಭಾವ, ಹಾಗೂ ಅಷ್ಟಾವರಣ ಪಂಚಾಚಾರದಲ್ಲಿ ನಿಷ್ಠೆಯಿಡುವಂತೆ ಅರುಹಿದ, ಆದಿ-ಅನಾದಿರೂಪನು, ನಿತ್ಯ ನಿರ್ಮಲ, ಭಕ್ತಿರೂಪನು, ಕರ್ಮಯೋಗವ ಖಂಡಿಸಿ,

ಸರ್ವಾರ್ಪಣ ಭಾವ ಸಮನಿಸುವಂತೆ" ಮಾಡಿದ ಪುಣ್ಯಾತ್ಮ ಹಾಗೂ "ಬಸವ" ನಾಮ ಪಠನದಿಂದ ಭವರೋಗಗಳು ಓಡಿ ಹೋಗುವವೆಂದು ಪರಿಪರಿಯಾಗಿ ವರ್ಣಿಸಿದ್ದಾನೆ. ಹೀಗೆ ಅಲ್ಲಮ, ಚನ್ನಬಸವಣ್ಣ, ಅಕ್ಕಮಹದೇವಿ, ಮಡಿವಳ ಮಾಚವಿಭು, ಮೋಳಿಗೆಯ ಮಾರಯ್ಯ ಸಾವಿರಾರು ಶರಣರು, ತದನಂತರ ಹರೀಶ್ವರ, ಸಿದ್ಧಲಿಂಗಯತಿಗಳು, ಪಾಲುಕುರಿಕೆಯ ಸೋಮನಾಥ ಹಾಗೂ ಅಧುನಿಕ ಸಾಹಿತ್ಯದಲ್ಲಿ ಅನೇಕ ಉತ್ತಮ ಪಂಡಿತರೂ ಅವನ ಬಗ್ಗೆ ಹೇರಳ ಬರೆದಿದ್ದಾರೆ. ಅವೆಲ್ಲನನ್ನೂ ಇಲ್ಲಿ ವಿವರಿಸಲು ಅಸಾಧ್ಯ.

ವೈವಿಧ್ಯತೆಯಲ್ಲಿ ಏಕತೆಯನ್ನು ಕಾಣಬೇಕೆಂದು ಹಲವರು ವಾದಿಸುವುದುಂಟು. ಆದರೆ ಇಂಥ ವೈವಿಧ್ಯತೆ ಉತ್ಕರ್ಷಕ್ಕೆ ನಾಂದಿಯಾಗಬೇಕಲ್ಲದೆ ಭಿನ್ನ ಭಿನ್ನ ವರ್ಗಗಳನ್ನು ಸೃಜಿಸಿ ಕುಠಾರ ಪ್ರಾಯವಾಗಬಾರದು. ನಾನು ಹಲವಾರು ವಿರಕ್ತ-ಗುರು ವರ್ಗದವರನ್ನು ಸಂದರ್ಶಿಸಿ ಈ ಬಗ್ಗೆ ಚರ್ಚಿಸಿದ್ದುಂಟು. ಕರುನಾಡಿನ ಮಹಾ ತಪಸ್ವಿಗಳೂ ವಯೋವೃದ್ಧರೂ ಆದ ಒಬ್ಬ ಜಂಗಮರು ಈ ವಿಷಯದ ಬಗ್ಗೆ 'ಹಿಂದಿನ ಕಾಲದಲ್ಲಿ ಸಮಯಭೇದದ ಇಬ್ಬರು ವಿರಕ್ತರು ಒಂದೆಡೆ ಕೂಡಿದರೆ ನಡುವೆ ಒಬ್ಬರ ಮುಖ ಮತ್ತೊಬ್ಬರು ನೋಡಬಾರದೆಂದು ಪರದೆ ಹಾಕಿಸುತ್ತಿದ್ದರೆಂದೂ", ಹೇಳುತ್ತ ಇಂಥ ಮನೋಭಾವಕ್ಕೆ ಅವರು ಅತೀವ ದುಃಖ ವ್ಯಕ್ತಪಡಿಸಿದರು. ಮುಂದುವರಿಯುತ್ತ ಇಂಥ ಮನೋಭಾವರದಲ್ಲಿ 'ವಿರತಿ' ಬರುವದಾರೂ ಹೇಗೆ? ಎಂದು ಪ್ರಶ್ನಿಸಿದರು. ಅಥಣಿ ಮುರುಘೇಂದ್ರ ಸ್ವಾಮಿಗಳು ಅಪಾರ ಶಕ್ತಿ ಪವಾಡಪುರುಷರು ಮಹಾ ತಪಸ್ವಿಗಳಾಗಿದ್ದರೂ ಅವರ ಆಚರಣೆ ಅನುಕರಣೀಯ. ಜಗದ್ಗುರು ಲಿಂ. ಜಯದೇವ ಸ್ವಾಮಿಗಳು ಅವರ ಪಾದಕ್ಕೆರಗಬೇಕೆಂದು, ಹೋದಾಗ ಅವರಿಗಿಂತ ಮುಂಚೆಯೇ ಅವರ ಪಾದಗಳಿಗೆರಗಿದ್ದರು. ಆಗ ಜಗದ್ಗುರುಗಳು 'ತಾವು ಹಿರಿಯರು, ಮಹಾ ತಪಸ್ವಿಗಳು ತಮ್ಮ ಪಾದಕ್ಕೆರಗುವುದು ನನ್ನ ಧರ್ಮ' ಎಂದರೆ, ಶಿವಯೋಗಿಗಳು 'ತಾವು ವಯಸ್ಸಿನಲ್ಲಿ ಚಿಕ್ಕವರಿದ್ದರೂ ಜಗದ್ಗುರು ಪೀಠಸ್ಥರು ಆದುದರಿಂದ ನಾನು ತಮಗೆ ಸಾಷ್ಟಾಂಗ ಹಾಕಬೇಕು" ಎಂದರಂತೆ. ಇಂಥ ಮನೋಭಾವ ಬೆಳೆದರೆ ಹಿತಕರ. ಇಂಥ ಸಾವಿರಾರು ಉದಾಹರಣೆಗಳನ್ನು ಕೊಡಬಹುದು.

ಪರಶಿವಗೆ ಈ ಮೇಲು ಕೀಳೆಂಬ ಭಾವನೆ ಹೊಲ್ಲ; ಆದುದರಿಂದಲೇ ಅವನಿಗೆ ಕಂಚಿದೊರೆಯ ಮೃಷ್ಟಾನ್ನಕ್ಕಿಂತ ಹೀನ ಕುಲದ ಮಾದಾರ ಚನ್ನಯ್ಯನ ಅಂಬಲಿ ರುಚಿಸಿತು. ಅವನು ಭಕ್ತಿಪ್ರಿಯ. ಭಕ್ತಿ ಪಂಥದವರು 'ಭಕ್ತಿ ಮಾರ್ಗ' ಶ್ರೇಷ್ಠ ಎಂದರೆ ಬೇರೆ ಮಾರ್ಗಗಳನ್ನು ಅಲ್ಲಗಳೆಯುವದಲ್ಲ. ಮುಕ್ತಿ ಮಾರ್ಗಕ್ಕೆ ಹಲವಾರು ದಾರ್ಶನಿಕರು ಕಂಡ ದಾರಿಗಳು ಬೇರೆ ಬೇರೆ ವಿನಾ ಅವೆಲ್ಲ ಅಸತ್ಯವೆನ್ನಲಾಗದು. ಒಂದು ಊರಿಗೆ ಹೋಗಲು ಮಾರ್ಗ ಸೂಚಿಯಿದ್ದಂತೆ ಊರು ತಲುಪಲು ಹಲವಾರು ಮಾರ್ಗಗಳಿರಬಹುದು ತಮ್ಮ ಅನುಕೂಲ ಪ್ರಕಾರ ಯಾವ ಮಾರ್ಗದಿಂದಲೂ ಗುರಿ ತಲುಪಲು ಸಾಧ್ಯ. ಒಬ್ಬರಿಗೆ ಒಂದು ಕಂಬದ ಮುಂಭಾಗ ವರ್ಣಿಸಲು ಸಾಧ್ಯ ಹಿಂಭಾಗ ಅಗೋಚರ ಆದುದರಿಂದ ವರ್ಣಿಸಲಸಾಧ್ಯ ಆ ಬದಿಯಿದ್ದವನು ಅದನ್ನು ವರ್ಣಿಸಿದರೆ ಸುಳ್ಳು ಎನ್ನಲಾಗುವುದೇ ? ಹಾಗೆ ದಾರ್ಶನಿಕ ವೈವಿಧ್ಯತೆ.

ಈ ಎಲ್ಲವನ್ನೂ ಗುರು ಜಂಗಮರು ಅರಿತು ಸಮಾಜಕ್ಕೆ ಮಾರ್ಗ ದರ್ಶನ ಮಾಡಬೇಕಾದರೂ ಮೇಲು ಕೀಳೆಂಬ ವಿಷಬೀಜವನ್ನು ಬೇರು ಸಹಿತ ಕಿತ್ತು ಹಾಕಿದರೆ ಉತ್ತಮ. ಈ ಭೇದ ಹೆಚ್ಚುವವನ್ನು ನೋಡಿ ನನ್ನ ಮನಸ್ಸು ನೊಂದಿದೆ; ಅನೇಕ ಜಗದ್ಗುರು ಪೀಠಗಳು ನಿರ್ಮಾಣವಾಗುತ್ತಿವೆ ಅದೂ ನಿಲ್ಲಬೇಕು. ನಿಜವಾದ ಸೇವೆ ಮಾಡುವ ಬಯಕೆಯಿದ್ದ ಪರಮಯೋಗಿಗೆ ಆ "ಜಗದ್ಗುರು" ಎಂಬ ಕೊಂಬೇಕೆ ? ರತ್ನ-ಮಾಣಿಕ್ಯ ತಿಪ್ಪೆಯಲ್ಲಿದ್ದರು ಅದರ ಬೆಲೆ ಕಡಿಮೆಯಾಗಲಾರದು.



# ಲಕ್ಕಣ್ಣದಂಡೇಶನ ಕಾಲದ ವಿಜಯನಗರ

—ಎಸ್. ಬಸಪ್ಪ, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು.

ಪ್ರೌಢ (ಇಮ್ಮಡಿ) ದೇವರಾಯನು ಕ್ರಿ. ಶ. 1424-1446 ಆಳುತ್ತಿದ್ದ ವಿಜಯನಗರಕ್ಕೆ ಮತ್ತೊಂದುಹೆಸರು 'ವಿಜಯ ಕಲ್ಯಾಣಪುರ' ಎಂದು 'ಲಕ್ಕಣ್ಣ ದಂಡೇಶನು' ಸೂಚಿಸಿರುವಂತೆ ತೋರುತ್ತದೆ. ಈ ಪುರವಾದರೋ ಪರಹಿತದ ಬೀಡು, ಸತ್ಯದ ನುಡಿಯ ನಡುನಾಡು, ದಯಾಸಮುದ್ರದಾವಾಸಸ್ಥಾನ, ಕೇಳಿದವರ ಇಷ್ಟಾರ್ಥಗಳನ್ನು ನೀಡುವ ತವರೂರು, ಈಶ್ವರನ ವೈಭವದ ನೆಲೆವನೆ, ಸದಾಚಾರ ಸದ್ಭಕ್ತಿಗಳ ಜನ್ಮಭೂಮಿ ಶಿವಾನುಭಾವಿಗಳ ಅಪರಿಮಿತ ಗೃಹ, ಪರಿಕಿಪರಿಗೆ ವಿಜಯ ಕಲ್ಯಾಣವಾಗಿ ಕಂಗೊಳಿಸಿತು.

ಆ ವಿಜಯನಗರದ ಭಕ್ತಗಣಂಗಳು 'ನೆಲದ ಮರೆಯೊಳಗೊಪ್ಪುವ ನವನಿಧಿಯಂತೆ' 'ಜಲಧಿಯೊಳು ತೊಳಪನವರತ್ನ ರಾಶಿಗಳಂತೆ" ಇರುವರಲ್ಲದೆ ಕುಲ ಅಕುಲವೆಂದೆಣಿಸದೆ ಮಲ, ಮಾಯ, ಪಾಶ ರಹಿತವಾದ ತ್ರಿವಿಧ ಲಿಂಗದ ಸೀಮೆಯಲ್ಲಿ ನಿಶ್ಚಲರಾಗಿದ್ದರು. ಅವರು ಸಂಸಾರದಲ್ಲಿದ್ದರೂ ನೀರಿನಲ್ಲಿರುವ ಪದ್ಮಪತ್ರ ಅಂಟಿಯೂ ಅಂಟದಂತಿದ್ದರಲ್ಲದೆ ಅವಿರಳ ಲಿಂಗದ ನೆಲೆವನೆಯೊಳಿರ್ದು ಉಭಯ ಕರ್ಮ ನಿರ್ಮಲರಾಗಿ ಜಂಗಮರಿಗೆ ದಾಸೋಹ ಮಾಡುತ್ತಿದ್ದರು. ಜಾತಿ, ವರ್ಣಾಶ್ರಮ, ಕುಲಗೋತ್ರ ಮಾತೆ, ಪಿತ, ಸತಿಪುತ್ರ ಬಂಧುವರ್ಗಗಳಲ್ಲಿಯೂ ಪ್ರೀತಿಯಿಂದ ಒಂದೇ ಪಟ್ಟನ್ನು ಹಿಡಿಯದೆ ಶಿವಧರ್ಮ ಮಾರ್ಗದಲ್ಲಿ ನಡೆಯುತ್ತ, ಜಂಗಮರಿಗೆ ದಾಸೋಹ ಮಾಡುವುದೇ ನಿಜಸುಖವೆಂದು ಭಾವಿಸಿ ಪರಸ್ತ್ರೀಯನ್ನು ತಾಯಿಯಂತೆಯೂ, ಪರಧನವನ್ನು ಗುರುಧನವೆಂದೂ, ಪರರನೋವೇ ತಮ್ಮ ನೋವೆಂದೂ, ಶಿವ ಮೂರ್ತಿಯೇ ಸದ್ಗುರುವೆಂದೂ ಗುರು ವಚನವೇ ಶಿವತತ್ವವೆಂದೂ, ಜಂಗಮವೇ ಸಾಕ್ಷಾತ್ ಪರಶಿವನೆಂದು ಭಾವಿಸಿ ಅವರಿಗೆ ವಸ್ತ್ರಾನ್ನಪಾನ ವಾಹನ ಅಲಂಕಾರಾದಿಗಳನ್ನು ಸಮರ್ಪಿಸುತ್ತಿದ್ದರು.

ಶರಣರ ಮನೋರಥವನ್ನರಿಯಲು ಪರಮೇಶ್ವರನು ಕರುಣೆಯಿಂದ ಜಂಗಮ ರೂಪದಿಂದ ಬಂದು ನಾನಾ ತೀರ್ಥಗಳನ್ನು ಸಂಚರಿಸಿ ಕೊನೆಗೆ ಈ ವಿಜಯನಗರವೇ ನಿರವದ್ಯ ಸುಕ್ಷೇತ್ರವೀ ವಿಜಯ ಕಲ್ಯಾಣವೆಂದು ತಿಳಿದು ಸಿಂಹಾಸನಾರೂಢನಾಗಿ ವಿಶ್ವತೋಮುಖನಾದನು. ಏಕನೆಂದೆನಿಸಿದ ಪರಶಿವನು ಅನೇಕತ್ವವನ್ನು ತಳೆದು ತನ್ನ ಮಹಿಮೆಯ ಮೂರ್ತಿವೆತ್ತಂತೆ ಸಾಕಾರನಾಗಿ ಪಲವವತಾರ ಭೇದಗಳಲ್ಲಿ ಕಾಣಿಸಿಕೊಂಡು ಪ್ರಖ್ಯಾತವಾಗಿ ವಿಜಯ ಕಲ್ಯಾಣಪುರದಲ್ಲಿ ಮಣಿಮಯ ಪ್ರಾಕಾರವೆಸೆವ ಸಿಂಹಾಸನದಲ್ಲಿ ಚರಲಿಂಗಮೂರ್ತಿಗಳ ಅವತಾರವನ್ನು ಪಡೆದಿದ್ದನು. ಒಟ್ಟುಗೂಡಿದ ಪುಣ್ಯರಾಶಿಗಳೋ ! ವಿಮಲ ಸುಜ್ಞಾನ ಸೂರ್ಯನ ಸಹಸ್ರಕಿರಣ ಸಮೂಹವೋ ! ಶಂಕರನ ವರಮಹಿಮೆಯೋ ! ಶಿವನ ಶಾಂತರಸದ ಪ್ರವಾಹವೋ ! ಶಿವಕಳೆಯ ಬಳಗವೊ ! ಶಿವಸುಖದ ಶರಧಿತೆರೆ ಆವರಿಸಿತೋ! ಎಂಬಂತೆ ಆಚರಲಿಂಗಮೂರ್ತಿಗಳು ಕಾಣುತ್ತಿದ್ದರು. ಪ್ರಕಾಶಿಸುವ ವಿಭೂತಿಯನ್ನು ಎಲ್ಲಾ ಅವಯವಗಳಿಗೂ ಧರಿಸಿದ್ದರು, ಕಾವಿವಸ್ತ್ರ, ಪರಿಶುದ್ಧವಾದ ರುದ್ರಾಕ್ಷಿ, ಹೊಳೆಯುವ ಜಪಮಾಲೆ, ಉದ್ದವಾದ ಜಡೆ ಇವುಗಳನ್ನು ಹೊಂದಿದ್ದರು ಇವರು, ದಿಗಂಬರದ ಶಿವಲಿಂಗದಲ್ಲಿ ನಟ್ಟದೃಷ್ಟಿಯನ್ನಿಟ್ಟು ಸಮಾಧ್ಯವಸ್ಥೆಯಲ್ಲಿದ್ದುದರಿಂದ ಆನಂದ ರಸವೊಸರುವ ಅಶ್ರುಧಾರೆಗಳು ಬೀಳುತ್ತಿದ್ದವು. ಮೈರೋಮಾಂಚಿತವಾಗುತ್ತಿತ್ತು. ಧರಿಸಿರುವ ವಿಭೂತಿಯ ಮೇಲುಗಡೆ ಬೆವರಿನಬುಗ್ಗೆ ಹೊರಸೂಸುತ್ತಾ ಇತ್ತು. ಇವರು ಬಡವರ ಸುರದ್ರುಮವಾಗಿಯೂ, ಭಕ್ತಿಯುಕ್ತರ ಮನೆಯ ಕಡವರವಾಗಿಯೂ, ಚಿಂತಿಪರಚಿಂತಾ ಸುರತ್ನವಾಗಿಯೂ, ದಾಸೋಹಂ ಭಾವದ ಕಾಮಧೇನುವಾಗಿಯೂ, ಸತ್ಯರ ಸುಧಾರಸವಾಗಿಯೂ, ಸುಜನರಿಗೆ ಸಖರಾಗಿಯೂ, ಬಿಡದೆ ನೆನೆವರ ಬೆಂಬಲಿಗ

ರಾಗಿಯೂ, ಸಾಧುಗಳಿಗೆ ಸರಿಸಮಾನರಾಗಿಯೂ ಇದ್ದರು. ಮೃತ್ಯುವನ್ನೇ ಸೇವಾವೃತ್ತಿಗೆ ಇಟ್ಟು ಕೊಂಡಿದ್ದರು, ಯಮನ ಕೋರದಾಡೆಯನ್ನು ಕಿತ್ತೆಸೆದಿದ್ದರು. ಮಾಯೆ ಸಪ್ತವ್ಯಸನ, ಅರಿಷಡ್ವರ್ಗಗಳನ್ನು ಗೆದ್ದಿದ್ದರು. ಶಿವ ಧರ್ಮವನ್ನು ಪ್ರಕಟಿಸುತ್ತ ಶಾಂತಿ ಮಂದಿರದಲ್ಲಿ ನಿಂದು ಆನಂದ ಮುದ್ರಿತರಾಗಿ, ಯೋಗದ ಮರ್ಮವನ್ನು ತಿಳಿದಿದ್ದರು.

ಆ ವಿಜಯ ಕಲ್ಯಾಣ ಪುರದ ಶಿವ ಮಹಿಮಾ ಸಂಪದವನ್ನು ವರ್ಣಿಸಲಸದಳ. ಹದಿನಾಲ್ಕು ಲೋಕಗಳಲ್ಲಿರುವ ಶಿವಮಹಿಮೆಯಲ್ಲವು ವಟಬೀಜದ ರೂಪದಲ್ಲಿ ಇಲ್ಲಿ ಸೂಕ್ಷ್ಮತೆಯನ್ನು ಪಡೆದು ಅದರ ತುದಿಮೊದಲನ್ನು ಅರಿಯಲು ಅಸಾಧ್ಯವಾಗಿ ಶಿವಭಕ್ತರಾನಂದ ಆಗರವೆನಿಸಿ ಸಕಲಾಗಮಪುರಾಣಗಳ ಸಮುದ್ರವೆನಿಸಿ ಮೆರೆಯುತಿತ್ತು. ಇಂತಹ ಸಿಂಹಾಸನಕ್ಕೆ ಅಧಿಪತಿಗಳಾಗಿ ಚರಲಿಂಗಮೂರ್ತಿಗಳಿದ್ದರು.

ಸಂಸಾರದ ಬಾಧೆಯಲ್ಲಿ ತೊಳಲುವ ಜೀವರ ಸಹವಾಸದಿಂದ ಮೋಹವು ಆವರಿಸುವುದೆಂದು ಬಗೆದು, ಸರ್ವೇಂದ್ರಿಯಂಗಳ ಭೋಗಮಂ ತೊರೆದು, ವಿರಾಗಿಗಳಾಗಿ ಪರಮಹಂಸಗತಿಯನ್ನು ಅರಿತು ಊರ್ಧ್ವಮುಖದಲ್ಲಿ ಸಂಚರಿಸುತ್ತ ಜಂಗಮರು ಮಾಲ್ಯವಂತಾಚಲೋತ್ತಂಸ ಸಿಂಹಾಸನಾ ರೂಢರಾಗಿದ್ದರು. ಹೆದರಿಕೆಯನ್ನುಂಟು ಮಾಡುವ ಕಾಲ ಕಾಮಾದಿಗಳನ್ನು ಭಂಜಿಸಿ, ಬಹಿರ್ವಿಷಯ ಸಂಗತಿಯ ಸುಖ ದುಃಖವನ್ನು ಜೈಸಿ, ನಿಸ್ಪೃತೆಯಿಂದ ನಿತ್ಯ ನಿರ್ವಾಣಪದದ ಸಿಂಹಾಸನದಲ್ಲಿ ನಿಂದು ನಿರಂಜನ ಮಹಾಲಿಂಗಯೋಗದಲ್ಲಿ ನಿತ್ಯರಾಗಿ ಅಂಜನಾದ್ರಿಯೊಳೆಸೆದರು. ಲಿಂಗದ ಮೋಹವನ್ನು ಬಿಟ್ಟು, ಪಂಚೇಂದ್ರಿಯ ಸುಖಗಳನ್ನು ಜರಿದು ಲಿಂಗ ರೂಪದಿಂದ ಬಂದ ಮಂಗಳ ಪದಾರ್ಥವನ್ನು ಶಿವಭಾವದಿಂದ ಸವಿದು, ಲೌಕಿಕರ ಹಂಗನುಳಿದು ತುಂಗವಿಕ್ರಮ ವೀರಭದ್ರೇಶ ನೊಲಿದಿರುವ ಮತಂಗಾಚಲನ ಗುಹಾಂತರದಲ್ಲಿ ಅವಿರಳರಾಗಿಯೂ, ನಿರಾಕುಳರಾಗಿಯೂ ಇದ್ದರು.

ನಂದಿವಾಹನನಾಗಿ ಕೈಲಾಸದಿಂದಲೇ ಬಂದ ಪಂಪಾಪತಿಯ ರಥದ ಬೀದಿಯಲ್ಲಿ ಗುರುಮೂರ್ತಿ ಒಂದೆತ್ತಿನಯ್ಯಗಳಾಗಿ ಒಂದು ಮನೆಯನ್ನು ರಚಿಸಿ ಸೋಹಂ ಭಾವವನ್ನು ಬಿಟ್ಟು ಜಂಗಮರಿಗೆ ದಾಸೋಹವನ್ನು ಮಾಡುತ್ತ, ಅಮೃತಾನ್ನ ಪಾನವಸ್ತ್ರಾದಿಗಳನ್ನು ಕೊಡುತ್ತ ವಂದಿಸುತ್ತಿದ್ದರು.

ಆದಿಶೇಷ ಬ್ರಹ್ಮರಿಗೂ ಅಲ್ಲಿರುವ ಪಂಪಾಕ್ಷೇತ್ರದ ಮಹಿಮೆಯನ್ನು ವರ್ಣಿಸಲು ಅಸಾಧ್ಯವಾಗಿದೆ. ಅದು ಅಣಿಮಾದಿ ಸಿದ್ಧಿಗಳ ನೆಲೆವೀಡು, ಸಕಲ ತೀರ್ಥಗಳ ಸಂಕುಳ, ವರ ಋಷಿಗಳಿಕ್ಕೆ, ಮನುಮುನಿಗಳಾಶ್ರಯ, ಮಹಾಪುರುಷರ ಆಡುಂಬೊಲ, ಹರಶರಣರ ತವರೂರು ಆಗಿದ್ದಿತು. ಅಲ್ಲಿ ರತ್ನಖಚಿತವಾದ ಭವನಗಳು, ಅನೇಕ ಕೋಟಿ ಮಣಿಗಳಿಂದ ರಚಿಸಿದ ಉಪ್ಪರಿಗೆಗಳು, ಚಿನ್ನದಿಂದ ನಿರ್ಮಿತವಾದ ಗೋಡೆಗಳು, ವಜ್ರದ ಕದ, ಪುಷ್ಯರಾಗದ ಜಗುಲಿ, ಮುತ್ತುಗಳ ಝಲ್ಲಿ, ಮೇಲ್ಕಟ್ಟು, ಪದ್ಮರಾಗದ ತೋರಣ ಸ್ತಂಭ ಇವುಗಳಿದ್ದವು. ಅಲ್ಲಿರುವ ಪ್ರತಿಯೊಬ್ಬ ಶಿವಭಕ್ತರ ಬಾಯಲ್ಲಿಯೂ ವೇದಘೋಷ, ಉಪನಿಷತ್ತುಗಳ ಡಂಗುರ, ಶಾಸ್ತ್ರಕೋಟಿಗಳ ಗರವಟಿಗೆ, ತರ್ಕದ ವಿಜಯ ಭೇರಿ, ಸಕಲಾಗಮಗಳ ನಿಸ್ಸಾಳ, ಮಂತ್ರ ದೇವತೆಗಳ ಉಗ್ಘಡಣೆ ಉಚ್ಚರಿಸುವ ಪಂಚಾಕ್ಷರೀ ಮಂತ್ರ ಇವುಗಳು ನರ್ತನಮಾಡುತ್ತಿದ್ದುವು.

ಆ ಕ್ಷೇತ್ರಕ್ಕೆ ಒಂದೊಂದು ಯೋಜನಾಂತರವಿರುವ ನಾಲ್ಕು ಬಾಗಿಲುಗಳಿವೆ. ಪೂರ್ವ ದಿಕ್ಕಿನಲ್ಲಿ ಕಿನ್ನರೇಶ್ವರ, ದಕ್ಷಿಣ ದಿಕ್ಕಿನಲ್ಲಿ ಜಂಬುಕೇಶ್ವರ, ಪಶ್ಚಿಮ ದಿಕ್ಕಿನಲ್ಲಿ ಸೋಮೇಶ್ವರ, ಉತ್ತರ ದಿಕ್ಕಿನಲ್ಲಿ ವಾಣಿಭದ್ರೇಶ್ವರರಿರುವರು. ಇವರೆಲ್ಲರ ಮಧ್ಯೆ ವಿರೂಪಾಕ್ಷನಿರುವನು. ಇವನು ಶಿವಲಿಂಗ ಕೋಟಿಗಳ ನಡುವೆ ನಿಶ್ಚಿಂತನಾಗಿ ಪಂಪಾಂಬಿಕೆಯ ಸಮರಸದಲ್ಲಿ ಅಲುಗದೆ ಒಪ್ಪುತ್ತ ಶರಣರಿಗೆ ಒಲಿದಿದ್ದನು.

ಅಲ್ಲಿಂದ ಮುಂದಕ್ಕೆ ಹನುಮತೇಶ್ವರನಿರುವನು. ಆವನನ್ನು ಭಕ್ತಿ ಭಾವುಕರು ಮನದಿಂದ ಪೂಜಿಸುತ್ತಿದ್ದರು.

ತುಂಗಾನದಿಯು ಸಕಲ ತೀರ್ಥಗಳ ಮಹಿಮೆಯನ್ನು ತನ್ನಲ್ಲಿ ಅಡಗಿಸಿಕೊಂಡು ಧರಾತಳದ ಜನವರ್ಗೆಲ್ಲಾ ಮಂಗಳ ಪ್ರದಳೆನಿಸಿ, ಪುರುಷಾರ್ಥಸಿದ್ಧಿಗಳನೀವ ಕೃಪಾರಸದಲ್ಲಿ ತುಂಗೆಯೆಂದೆನಿಸುತ್ತ ಭದ್ರಲಕ್ಷಣವಿಡಿದು ತುಂಗಭದ್ರ ನಾಮವನ್ನು ಹೊಂದಿ ಪ್ರವಹಿಸುವಳು. ಆ ನದೀತೀರದಲ್ಲಿ ಪಂಪಾಪತಿ, ರಂಭೇಶ್ವರ, ನರೇಶ್ವರ, ಶಂಭುಮುಕ್ತೇಶ್ವರ, ಮಲ್ಲಿಕಾರ್ಜುನಲಿಂಗ, ಲಕುಮಣೇಶ್ವರ, ಮಹಾಕಾಳದೇವರು, ಮಾರ್ಕಂಡೇಶ್ವರ, ಇಂದ್ರೇಶ್ವರ, ಸೋಮೇಶ್ವರ, ಚಿಕ್ಕಪಂಪಾದೇವಿ, ನಗ್ನೇಶ್ವರ, ಶಂಕರೇಶ್ವರ, ಅಘೋರೇಶ್ವರ, ನಾಗೇಶ್ವರ, ಕೇತಾರದೇವರು, ಛಾಯಾಮಲ್ಲಿಕಾರ್ಜುನ, ವರುಣೇಶ್ವರ, ವಾಯುವೀಶ್ವರ, . ಕುಬೇರೇಶ್ವರ, ಜಡೆಯ ಶಂಕರ ದೇವರು, ಪಾತಾಳ ಗಂಗೆಯ ಸೋಮಶೇಖರ, ಲೋಕಪಾವನ ದೇವರು, ಕೋಟಿ ಶಂಕರ ದೇವರು, ಏಕಾಂತರಾಮೇಶ್ವರ ಇವರೇ ಮೊದಲಾದವರಿರುವರು. ಮನ್ಮಥ ಸೋಮ, ಮಹಾಕಾಳ, ತಾರಾ, ಸೂರ್ಯ, ವತ್ಸ, ತಾಪ್ಯ, ನಾಗ, (ರಗಳೆ)ಮಾರ್ಕಂಡೇಯ, ಗಜ, ಅಶ್ವ ಬ್ರಹ್ಮ ತೀರ್ಥಂಗಳಿವೆ. ಈ ಹೆಸರುಳ್ಳ ಹನ್ನೊಂದು ತೀರ್ಥಗಳಿರುವುವು. ಅಲ್ಲಿಂದ ಮುಂದಕೆ ವಸಿಷ್ಠಾಶ್ರಮದಲ್ಲಿ ಪಾಪವಿನಾಶಿನಿ, ದಶಾಶ್ವಮೇಧ ವಿಧಾನ ತೀರ್ಥಗಳಿರುವುವು. ಬದರಿಕಾಶ್ರಮದಲ್ಲಿ ಕೋಟಿವರೆ ತೀರ್ಥವಿದೆ. ಮುಂದೆ ಮಾಲ್ಯವಂತಾಚಲ, ಋಣವಿಮೋಚನ ತೀರ್ಥ, ಯಕ್ಷತೀರ್ಥ, ಗದಾ, ಧನುಸ್, ಶಂಖ, ಚಕ್ರ, ಪದ್ಮದಳ ಮೊದಲಾದ ತೀರ್ಥಗಳಿರುವುವು. ಅಲ್ಲಿಂದ ಮುಂದೆ "ಮಾತಂಗ ಗಿರಿ" ಗಗನ ಚುಂಬಿತವಾಗಿ ನಿಂತಿದೆ. ಆಪರ್ವತದ ತುದಿಯಲ್ಲಿ ವೀರೇಶ್ವರನು 'ಹರನಲ್ಲಿ ಕಾಮಿತವ ಬಯಸುವವರ್ಬನ್ನಿ ಪುರಹರನ ನೇಮದೊಳು ನಿಮ್ಮಭಿಮತವ ನೀವೆನೆಂದುರು ಮುದದಿ ಕರೆವಂತೆ' ನಿಂತಿರುವನು. ಅವನು ಶಿವನಿಂದಕರನ್ನು ಘಾತಿಸಿ, ಶಿವೈಕನಿಷ್ಠರ ಮನೋಭೀಷ್ಟವನ್ನು ಒಲಿದಿತ್ತು, ಲೋಕಗಳಲ್ಲೆಲ್ಲಾ ಪುರಹರನ ಬಿರುದಾವಳಿಗಳನ್ನು ಡಂಗುರ ಹೊಯ್ಸಿ, ಸುಜನರಿಗೆ ನಿರ್ಭೀತಿಯನ್ನುಂಟುಮಾಡಿ, ಪಂಪಾಪತಿಗೆ ಸಂತಸವನ್ನೆಸಗಿ ಮೆರೆದನು. ಅಲ್ಲಿ ವತ್ಸನಾಭಿ, ಅಗ್ನಿ, ರಾಮ, ಪಿತೃ, ನಿತ್ಯಮಾಂಗಲ್ಯಕರ, ಶ್ರೀರುದ್ರಪಾದ ಎಂದು ಹೆಸರು ಪಡೆದ ಅನೇಕ ತೀರ್ಥಗಳಿವೆ. ಆ ಪಂಪಾ ಕ್ಷೇತ್ರದಲ್ಲಿ ವಿಷ್ಣು ಹರಿಪದವಿಯನ್ನು ಬ್ರಹ್ಮನು ಅಜಪದವಿಯನ್ನೂ ಪಡೆದರು. ಅದು ಶಿವನ ಲೀಲಾಸ್ಥಲವೆನಿಸಿ ಶಿವಭಕ್ತರ ಗುಂಪಿನಿಂದಲೂ, ಅನೇಕ ಲಿಂಗ ತೀರ್ಥಗಳಿಂದಲೂ ಕೂಡ ಪ್ರಪಂಚಕ್ಕೆಲ್ಲಾ ಆಭರಣವಾಗಿ ಚಿಂತಿತಾರ್ಥವನ್ನು ಕೊಡುತ್ತ ಮರ್ತ್ಯಲೋಕ ಪಾವನನೆನಿಸಿ ಮೆರೆಯಿತು. "ಪಂಪಾಪುರಿ" ಎಂದು ಒಮ್ಮೆ ಉಚ್ಚರಿಸಿದರೆ ಪಾಪ ಪರಿಹಾರವಾಗಿ ಶಿವಪದವಿ ದೊರೆಯುವುದು ಅದು ಮರೆಹೊಕ್ಕವರನ್ನು ಕಾಪಾಡದೆ ಬಿಡುವುದಿಲ್ಲ. ಹೀಗಿರುವಾಗ ಆ ಕ್ಷೇತ್ರದ ಮಹಿಮೆಯನ್ನು ಹೊಗಳಲು ಹೇಗೆ ತಾನೆ ಸಾಧ್ಯವಾದೀತು ! ಅದರ ಮಹಿಮೆ ಕಾಶೀ ಕ್ಷೇತ್ರಕ್ಕೆ ಎರಡರಷ್ಟು, ಗಯೆಗೆ ನಾಲ್ಕರಷ್ಟು ಕೇದಾರಕ್ಕೆ ಎಂಟರಷ್ಟು ಆಗಿತ್ತು.

ಪಂಪಾಕ್ಷೇತ್ರವೆಂದರೆ ಮನೋಜನನ್ನು ಶಿವನು ಕಣ್ಣುರಿಯಿಂದ ದಹಿಸಿದ ಸ್ಥಳ, ಸ್ಮರನನ್ನು ಪುನಃ ಬದುಕಿಸಿಕೊಡುವುದಾಗಿ ಶಿವನು ರತಿಗೆ ವರವನೀಯುತ್ತು ಮೆರೆದ ತಾಣವದು. ಹರಿ ಅಜ ಸುರೇಂದ್ರಾದಿ ದಿಗ್ಪಾಲರು ಮನು ಮುನಿ ಪರುರಗ ಕಿನ್ನರ ಗರುಡ ಸಿದ್ಧ ವಿದ್ಯಾಧರರು ವರಪಡೆದ ಸ್ಥಾನವದು.

ಶಕ್ತಿಯೇ ಜಗದುದಯಕ್ಕೆ ಕಾರಣವೆಂದೂ, ವಿಮಲ ಶಕ್ತಿಯೇ ಊರ್ಧ್ವಮುಖಿಯೆಂದೂ ತಿಳಿದು ಸುಜ್ಞಾನ ಶಕ್ತಿಯೇ ಬಹಿಷ್ಕರಿಸಿ ಸತ್ಕ್ರಿಯಾಶಕ್ತಿ ಎಂಬ ಹೆಸರನ್ನು ಪಡೆದು ಭಕ್ತಿ ಮುಕ್ತಿಗಳನ್ನು ಕೊಡುತ್ತ ಸಂಸಾರದಲ್ಲಿ ಅತಿ ವಿರಕ್ತ ಭಾವವನ್ನು ಆಚರಿಸಿ ಸನ್ಮಾರ್ಗದಲ್ಲಿ ನಡೆವ 'ಕ್ರಿಯಾಶಕ್ತಿಯತಿರಾಯ'ನೇ ವಿರೂಪಾಕ್ಷನಿಗೆ ಅಭಿನ್ನನಾಗಿದ್ದನು.

ದಕ್ಷಿಣಾಮೂರ್ತಿಯತಿರಾಯನು ಯಾವಾಗಲೂ ಸಚರಾಚರಗಳನ್ನು ತನ್ನ ಹೊಟ್ಟೆಯಲ್ಲಿ ಹುದುಗಿಸಿಕೊಂಡು ಜಗದುದಯವನ್ನು ಪರಿಪಾಲಿಸುತ್ತ ದುರಿತ ಕೋಟಿಗಳನ್ನು ತನ್ನ ಫಾಳಾಕ್ಷದಿಂದ ದಹಿಸುತ್ತ, ಶರಣಾಗತರಿಗೆ ಅಕ್ಷಯ ಪದಂಗಳನಿತ್ತು, ದೀಕ್ಷೆಯನ್ನು ಕರುಣಿಸಿ ಕೃಪಾ ಕಟಾಕ್ಷವನ್ನು ಬೀರುತ್ತಾ ಇದ್ದನು.

ಆಕಾಶ ಮಧ್ಯದಲ್ಲಿರುವ ಸೂರ್ಯನು ತನ್ನ ಸಾಸಿರ ಕಿರಣಗಳಿಂದ ದಿಕ್ತಟಗಳನ್ನು ಬೆಳಗುವ ಹಾಗೆ 'ಗುರು ಮೂರ್ತಿ'ಯತಿರಾಯನು ಶರಣ ಹೃದಯಾಕಾಶ ಮಧ್ಯ ದಲ್ಲಿ ಸುಜ್ಞಾನ ಸೂರ್ಯನಾಗಿದ್ದುಕೊಂಡು ಇಂದ್ರಿಯ ಸಮೂಹದಲ್ಲಿ ತಪ್ಪದೆ ಮುತ್ತುವ ಮಾಯಾತಮವನ್ನು ಹೋಗಲಾಡಿಸಿ ನಿತ್ಯ ಸುಖದಿಂದಿದ್ದನು.

ದೇವರಾಜೇಂದ್ರನು ತನ್ನ ಭುಜ ಪರಾಕ್ರಮದಿಂದ ಮೂರು ರಾಯರೆನಿಪ್ಪ ಗಜಘಟೆಗಳಿಗೆ ಸಿಂಹರೂಪ ನಾಗಿ ಸುಜನರನ್ನು ಕಾಪಾಡುತ್ತ, ಶಿವಾರ್ಚಕರಿಗೆ ಯಾವಾ ಗಲೂ ಸಮಾಧಾನವಿತ್ತು ವಿಜಯ ಕಲ್ಯಾಣಪುರದಲ್ಲಿ ಪಂಪಾವಿರೂಪಾಕ್ಷನನ್ನು ನಿತ್ಯ ಭಜಿಸುತ್ತಿದ್ದನು.

ಪೂಜಕನು ತಾನೇ ಆಗುವೆನೆಂದು ಸಾಕ್ಷಾತ್ ವಿರೂ ಪಾಕ್ಷನು ಒಪ್ಪಿ ಸ್ವಲೀಲೆಯಿಂದ ರಾಜಾಧಿರಾಜ ಪರಮೇ ಶ್ವರ ಶ್ರೀವೀರ ದೇವರಾಜೇಂದ್ರನಾಗಿ ಪ್ರಕಾಶಿಸುತ್ತ ಸಕಲ ದೇಶ ಮುಕುಟವರ್ಧನ ವಿರಾಜಿತ ಮಹಾರತ್ನ ಸಿಂಹಾಸನ ದಲ್ಲಿ ಅಧಿಕ ತೇಜದಿಂದ ಪ್ರತ್ಯಕ್ಷನಾಗಿ ಮೆರೆದನು. ಅವನು ದೇವಲೋಕದ ಸಕಲ ವೈಭವಗಳೊಡನೆ ಭೂಭಾಗದ ವಿಜಯ ಕಲ್ಯಾಣ ಪುರಕ್ಕೆ ಬಂದು ಪಂಪಾವಿರೂಪಾಕ್ಷ ಭವ ನದ ನಾಲ್ಕು ದಿಕ್ಕುಗಳಲ್ಲಿ ಕಿಕ್ಕಿರಿದ ಮಣಿಗಳ ಕೋಟೆಗ ಳನ್ನೂ, ಲಾವಣ್ಯತರ ಗೋಪುರಗಳನ್ನೂ ರಚಿಸಿದನು. ಇವನ ಹುಟ್ಟುವಿಕೆಯು ವಿರೂಪಾಕ್ಷನ ಮನೋರಥಕ್ಕೆ ಸುಮಾರ್ಗವಾಯಿತು. ಇದಕ್ಕೆ ದೃಷ್ಟಾಂತವೋ ಎಂಬಂತೆ ಪಂಪಾಪುರದಲ್ಲಿ ಪ್ರತಿ ದಿನವೂ ಅಪರಿಮಿತ ಗೋಪುರಗಳ ಮಧ್ಯ ವೀಥಿಯಿಂದ ರಿಪುಕಂಟಕಗಳನ್ನು ಸವರುವ ಹಾಗೆ ರಥವು ಹರಿಯುವುದಕ್ಕೆ ದಾರಿ (ರಸ್ತೆ) ಯನ್ನು ಮಾಡಿಸಿ ದ್ದನು. ಆ ಮಹಾರಥ ಹರಿಯುವ ದಾರಿಯ ಇಕ್ಕೆಲದಲ್ಲಿ ಸದಾ ಸಂಚರಿಸುವವರಿಗೆ ಕಾಮಿತಾರ್ಥಗಳನ್ನು ಕೊಡುವ ಕಲ್ಪವೃಕ್ಷಗಳಿದ್ದುವು. ನಾನಾ ವಿಧವಾದ ಹಣ್ಣು ಹಂಪಲು ಗಳಿಂದ ತುಂಬಿ ಶೋಭಿಸುವ ಉದ್ಯಾನ ವನಗಳಿದ್ದವು. ಪಂಪಾಪತಿಯ ಮನೋರಥದ ರೂಪವೇ ತಾನಾದನೆಂಬ ವಿಚಾರವನ್ನು ಜಗಕ್ಕೆ ಪ್ರಕಟಪಡಿಸಿದನೋ ಎಂಬಂತೆ ವಿರೂಪಾಕ್ಷ, ಪಂಪಾಂಬಿಕೆ, ನಾನಾರಸದ ಗಣಾಧಿಪರ ರಥವನ್ನು ಸಂತೋಷದಿಂದ ಹರಿಯಿಸಿ ಪ್ರಸಿದ್ಧಿ ಪಡೆದ ದೇವರಾಜೇಂದ್ರನದೇಂ ಪ್ರತಾಪನೊ ! ಎಂದು ಮುಂತಾಗಿ ಬಣ್ಣಿಸಿರುವುದು ಕಂಡುಬರುತ್ತದೆ.

## ಸೂರೆ

ನನ್ನ ಕಥೆ ಕೇಳದಿರು
ಹುಚ್ಚು ಹಿಡಿದಿದೆ ನನಗೆ
—ದೂರ ಹೋಗು

ನೀನೆಟ್ಟು ನೀರೆರೆದು
ಕಳೆಕಿತ್ತು ಬೆಳೆಸಿದ್ದ
ಹೂದೋಟದಲಿ ಹಿಂಡು
ದನ ನುಗ್ಗಿ ಮಲಗಿಹವು
ತಿಂದು ತುಳಿದು.

ನನ್ನದೆಯ ಬೇಗೆಯನು
ಅರಿತಿದ್ದ ಪ್ರೇಮಮಯಿ
ಹೇಮಪಂಜರದಲ್ಲಿ
ನರಳಿ ಸೊರಗುವ ನೋಟ ಮರೆಯಾಗದು.

ಅಡಚಣೆಯ ನದಿಯಾಚೆ
ಕಂಗೊಳಿಸಿ ಮನಸೆಳೆದ
ಪ್ರೇಮ ದೇಗುಲಕೆಂದು
ಈಜಿದೆನು ಗುಡಿಯಲ್ಲಿ
ಮೂರ್ತಿಯಿಲ್ಲ.

ಪಾಲು ದೇಗುಲದಲ್ಲಿ
ಜಾಗಟೆಯ ಬಡಿಯುತಿಹೆ
ನನ್ನೆದೆಯ ಬಡಿತವನು
ಕೇಳಬಾರದು ಎಂದು
ಕಿವುಡು ಹಿಡಿದು.

—ಬಿ. ಕೆ. ತಿಮ್ಮಪ್ಪ, ಎಂ. ಎ.
ಕಾಸರಗೋಡು.

# ಮಾ ಯೆ ಯ ಮೋ ಹ

—ಪಂಡಿತ ಕೆ. ಪಿ. ಶಿವಲಿಂಗಯ್ಯ, ಎಂ. ಎ.

ಕನ್ನಡ ಸಾಹಿತ್ಯವನ್ನು ಅತ್ಯಂತ ಎತ್ತರಕ್ಕೊಯ್ದು ಅದನ್ನು ಸಮೃದ್ಧವಾಗಿಸಿದ ಮಹಾ ಕವಿಗಳಲ್ಲಿ ಕ್ರಿ. ಶ. 1430ರಲ್ಲಿದ್ದ ಚಾಮರಸನೂ ಒಬ್ಬ. ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿದ್ದ ಈತ, ಕುಮಾರವ್ಯಾಸನ ಭಾವಮೈದುನನಾಗಿದ್ದನೆಂದೂ ಪ್ರತೀತಿಯುಂಟು. ಈ ಚಾಮರಸ ಕವಿ ಬರೆದಿರುವ "ಪ್ರಭುಲಿಂಗಲೀಲೆ," ಅಲ್ಲಮಪ್ರಭುವಿನ ಕಥೆಯನ್ನು ಹೇಳ ಹೊರಟಿದ್ದರೂ ಆ ಕಾಲದ ಶಿವಶರಣ-ಶರಣೆಯರ ವಿಚಾರವನ್ನು ಕೂಡ ಸಿಂಹಾವಲೋಕನ ಕ್ರಮದಲ್ಲಿ ತಿಳಿಯಪಡಿಸುತ್ತದೆ.

ಮಾಯಾದೇವಿ, ಅಲ್ಲಮಪ್ರಭುವಿನ ಜೀವನದ ಯೌವನದಲ್ಲಿ ಮಿಂಚಿ ಮಾಯವಾಗುವ ವ್ಯಕ್ತಿ. ಕೈಲಾಸದಲ್ಲಿ ಪಾರ್ವತೀ ಪರಮೇಶ್ವರರಿಗೆ ಸಂವಾದ ನಡೆದಾಗ, ದೇವಿ ಅಲ್ಲಮನ ನಿಜ ತತ್ವವನ್ನು ಅರಿತು ಬರಲು ತನ್ನ ತಾಮಸ ಕಳೆಯನ್ನು ಭೂಲೋಕಕ್ಕೆ ಕಳುಹಿಸಿದ್ದಳು. ಆ ಶಕ್ತಿದೇವಿಯೇ ಹನ್ನೆರಡನೆಯ ಶತಮಾನದ ಆದಿಭಾಗದಲ್ಲಿ ಬೆಳುವಲ ನಾಡಿನ ರಾಜಧಾನಿಯಾಗಿದ್ದ ಬನವಾಸಿಯ ಮಮಕಾರ ಭೂಪಾಲ—ಮೋಹಿನೀದೇವಿಯರಿಗೆ ಮಗಳಾಗಿ ಜನಿಸಿದಳು.

ವಯಸ್ಸಿನಿಂದ, ವಿದ್ಯೆಯಿಂದ, ರೂಪಿನಿಂದ ತನಗೆ ಸಮಾನರೇ ಇಲ್ಲವೆಂಬಂತೆ ಶೋಭಿಸುತ್ತಿದ್ದ ಮಗಳಿಗೆ ವರನನ್ನು ಹುಡುಕುವುದು ಮಮಕಾರನಿಗೆ ಕಷ್ಟದ ಕೆಲಸವೇ ಆಗಿತ್ತು. ಆಗೊಮ್ಮೆ ಅರಮನೆಗೆ ಬಂದ ರಾಜಗುರು ಅಹಂಕಾರಾಚಾರ್ಯರು 'ಸದಾ ಶಿವಂಗೆ ಈ ಲಲನೆಯಲ್ಲದೆ ನರರಿಗುಚಿತವೇ ಭೂಪ' ಎಂದರು. ಅದನ್ನು ಕೇಳಿದ ಮಮಕಾರ ಮಹಾರಾಜನಿಗೆ ಆಶ್ಚರ್ಯವೇ ಆಯಿತು. ಗುರುವಿನಿಂದ ಉಪದೇಶ ಪಡೆದ ರಾಜಪುತ್ರಿ ಅವರ ಅನುಜ್ಞೆಯಂತೆ ರಾಜಧಾನಿಯಲ್ಲಿದ್ದ ಮಧುಕೇಶ್ವರ ಸ್ವಾಮಿಯನ್ನು ಪ್ರತಿ ದಿನವೂ ಪೂಜಿಸುತ್ತಾ 'ನೀನೆ ನನಗೆ ಪತಿಯಾಗಬೇಕು' ಎಂದು ಪ್ರಾರ್ಥನೆ ಮಾಡುತ್ತಿದ್ದಳು. ಇಲ್ಲಿಂದ ಮುಂದಿನದೇ "ಮಾಯೆಯ ಮೋಹ" ನಾಟಕ.

ಅಲ್ಲಮನ ಮದ್ದಳೆಯ ಧ್ವನಿಯನ್ನು ಕೇಳಿದ ಮಾಯೆ "ಕಾರ ಮುಗಿಲಿನ ಗರ್ಜನೆಯ ಕಿವಿಯಾರೆ ಕೇಳಿದ ಸೋಗೆ"ಯಂತಾದಳು. ಮುಂಗಾರು ಮಳೆಗಾಲದಲ್ಲಿನ ಗುಡುಗು ಧ್ವನಿ ಕೇಳುವ ನವಿಲು ಆನಂದದಿಂದ ನರ್ತಿಸತೊಡಗುವುದಂತೆ! ಅಂತಾಯಿತು ಈ ನವಯೌವನದ ತರುಣಿ ಮಣಿಯ ಸ್ಥಿತಿ. ಮದಮಾನಿ, ಸಕಳೆಯರೆಂಬ ತನ್ನ ಸಖಿಯರನ್ನು ಕಳುಹಿಸಿ ಅವನನ್ನು ಬರಮಾಡಿಕೊಂಡಳು. ತಾನು ಪರದೇಶದವನೆಂದೂ, ತನ್ನ ಹೆಸರು ಅಲ್ಲಮನೆಂದೂ, ದೇಶಾಟನೆ ಮಾಡುವುದೇ ತನ್ನ ಕಾರ್ಯವೆಂದೂ ಆತ ಹೇಳಿದನು. ಅಂತಃಪುರದಲ್ಲಿಯೇ ಇದ್ದು ಆತನಿಗೆ ಬರುವ (ಕಲಾ) ವಿದ್ಯೆಗಳನ್ನೆಲ್ಲಾ ರಾಜಕುಮಾರಿಗೆ ಹೇಳಿಕೊಡಬೇಕೆಂದು ಸಖೀ ಜನರು "ಮಾಯೆ"ಯ ಪರವಾಗಿ ಪ್ರಾರ್ಥಿಸಿಕೊಂಡರು. ಅಷ್ಟು ಹೊತ್ತಿಗೆ ಅತ್ತ ಕಡೆಯೇ ಬಂದ ರಾಜನೂ, ವಿಚಾರವನ್ನೆಲ್ಲ ಕೇಳಿ ಅನುಮತಿ ಕೊಟ್ಟನು.

ಕನ್ನೆಮಾಡದ ಚೌಪಾಳಿಗೆಯಲ್ಲಿ ನೃತ್ಯಾಭ್ಯಾಸ ಪ್ರಾರಂಭವಾಯಿತಾದರೂ, ಮಾಯಾದೇವಿಗೆ ಬೇಕಾದದ್ದು 'ಅಭಿನವ ಕಾಮ'ನಂತಿದ್ದ ಅಲ್ಲಮನನ್ನು ಬೆರೆಯುವುದು. ಅದನ್ನು ಬಾಯಿಬಿಟ್ಟು ಹೇಳಲಾರಳು; ಹೇಳದೇ ಇರಲಾರಳು. ಕೊನೆಗೆ ಗೆಳೆಯರೇ ಅದಕ್ಕಾಗಿ ಅಣಿಮಾಡತೊಡಗಿ, ಒಂದಿರುಳು ಮಾಯಾದೇವಿಯ ಶಯ್ಯಾಗೃಹದಲ್ಲಿ ಇಬ್ಬರನ್ನು ಕೂಡಿ ಹಾಕಿದರು.

ಆದರಿಂದಾದುದೇನು? ನಾಟಕದ ಮೂರನೇ ದೃಶ್ಯಾರಂಭದಲ್ಲಿ ಕಂಡಂತೆ 'ಮಾಯೆ' ತನ್ನ ಆಸೆ ಲೇಶವೂ ಈಡೇರದೆ ದುಃಖಿತಳಾಗಿ ಕೂದಲು ಹರವಿಕೊಂಡು ಕುಳಿತಿದ್ದಳು. ಮಿಂಚಿನಂತೆ ಕಣ್ಣಿಗೆ ಕಂಡರೂ, ಕೈಗೆ ಸಿಕ್ಕುವುದಿಲ್ಲ. ಅಪ್ಪಿದರೂ ಬಯಲನಪ್ಪಿದಂತೆ! ಈ ಹಗರಣ ರಾಣಿ ಮೋಹಿನೀ ದೇವಿಗೂ ಗೊತ್ತಾಗಿ, 'ಇಂತಹ ಕೆಲಸ ಮಾಡುವುದು ಸರಿಯಲ್ಲ' ಎಂದು ಬುದ್ಧಿವಾದವಿತ್ತಳು.

ಕತ್ತಲೆಯನ್ನೂ ಸೂರ್ಯನನ್ನೂ ಒಂದುಗೂಡಿಸಲು ಪ್ರಯತ್ನಿಸಿದಂತಾಗಿತ್ತು ! ನೀರಿನಲ್ಲಿ ಮುಳುಗಿದ ಸುಣ್ಣಕಲ್ಲಿನಂತೆ, ಅಲ್ಲಮನೊಂದಿಗೆ ಕೂಡಬಯಸಿದ ಮಾಯಾದೇವಿ ವಿರಹಾವಸ್ಥೆಯಿಂದ ಬಳಲುತ್ತಿದ್ದಳು.

ಈ ವೇಳೆಗೆ ಸರಿಯಾಗಿ ಕೈಲಾಸದಿಂದ ಬಂದ "ವಿಮಳೆ" ಮಾಯಾದೇವಿಯನ್ನು ಸಂಧಿಸಿ, ಅವಳು ಗಿರಿಜೆಯ ಪ್ರತಿಜ್ಞೆಯನ್ನು ಪೂರ್ಣಮಾಡಲು ಬಂದ ಕಾರಣ ಕನ್ಯೆಯೆಂದು ತಿಳಿಸಿ, ಅಲ್ಲಮನನ್ನು ಅರಿಯುವುದೇ ಮುಂದಿನ ತ್ವರಿತ ಕಾರ್ಯವೆಂದು ನೆನಪು ಮಾಡಿಕೊಟ್ಟಳು. ಆಗ ನೆನಹಿನ ನೆಳಲು ಮಿಂಚಿದಂತೆ, ಮಾಯೆಗೆ ಎಲ್ಲ ಸಂಗತಿಯೂ ಜ್ಞಾಪಕಕ್ಕೆ ಬಂದು ಕರ್ತವ್ಯವನ್ನಿೀಡೇರಿಸಲು ವಿಮಳೆಯೊಂದಿಗೆ ಮುಂದಾದಳು.

(ನಾಲ್ಕನೆಯ ದೃಶ್ಯ)

ವಿಮಳೆಯೊಂದಿಗೆ ಮಾಯಾದೇವಿ ಮಧುಕೇಶ್ವರ ದೇವಾಲಯಕ್ಕೆ ಬಂದು ನರ್ತಿಸತೊಡಗಿದಳು. ಅಲ್ಲಮ ಅತ್ಯಂತ ಮನೋಹರವಾಗಿ ಮೃದಂಗವನ್ನು ಬಾರಿಸುತ್ತಿದ್ದನು. ಆ ಸಮಯದಲ್ಲಿ ವಿಮಳೆ ಮಾಯೆಗೆ ಅಲ್ಲಮನ ನಿಜಸ್ಥಿತಿಯನ್ನು ಕಣ್ಣು ಸನ್ನೆಯಿಂದಲೇ ಸೂಚಿಸಿದಳು. "ಅಂಗನೆಯರಿಗೆ ಕಂಗಳಲ್ಲಿಯೆ ಸರ್ವ ಪ್ರಪಂಚ ಸಹಜವೆನ್ನುವಂತೆ ತೋರುತ್ತಿದೆ" ಎಂದಳಾಗ ಸಕಳೆ ಮದಮಾನಿಯೊಂದಿಗೆ. ಮಾಯಾದೇವಿ ಅಲ್ಲಮನ ಚಿತ್ತ ಸೆಳೆಯಲೆಂದು ಚಿತ್ರವಿಚಿತ್ರವಾಗಿ ನರ್ತನ ಮಾಡತೊಡಗಿದೊಡನೆ ಅಲ್ಲಮನು ಮದ್ದಳೆಯನ್ನು ಬಿಸುಟು ಮಿಂಚಿನಂತೆ ಮಾಯವಾದನು.

ಸರಿ, ನಾಲ್ವರು ಹೆಂಗಳೆಯರೂ ಅಲ್ಲಮನನ್ನು ಹುಡುಕಲೆಂದು ಕಾಡೆನ್ನದೆ ಬೀಡೆನ್ನದೆ ಅಲೆಯ ತೊಡಗಿದರು.

(ಐದನೆಯ ದೃಶ್ಯದಲ್ಲಿ)

ಇನ್ನು ಹೆಚ್ಚು ಕಾಡಿಸಬಾರದೆಂದು ಪ್ರಭು ಕಾಣಿಸಿಕೊಂಡನು. ಸಿಕ್ಕಿದ್ದೇ ತಡ, ಎಲ್ಲರೂ ಪರಿಪರಿಯಾಗಿ ತಂತಮ್ಮ ದುಮ್ಮಾನವನ್ನು ತೋಡಿಕೊಂಡರು. ಮಾಯೆಯಂತೂ 'ಬೆಂದ ಹುಣ್ಣನ್ನು ಕಂಬಿಯಲ್ಲಿ ಕೀಸಬೇಡ'— ಎಂದು ಬೇಡಿದಳು. ವಿಮಳೆಯೂ ತನ್ನ ಗೆಳತಿಯ ಬಗೆಗೆ ಕರುಣೆ ತೋರಿಸಬೇಕೆಂದು ಪ್ರಾರ್ಥಿಸಿಕೊಂಡಳು. ಅದಕ್ಕೆ ಪ್ರಭು ನೀರಿಗೆ ಹೆಪ್ಪು ಹಾಕಿದರೆ ಅದು ಮೊಸರಾಗಿ ಹೆತ್ತುಕೊಂಡು ತಿನ್ನಲು ಯೋಗ್ಯವಾದೀತೆ ? ಎಂದನು. 'ಕಬ್ಬಿಣದಂತೆ ಇರುವ ಹೆಣ್ಣಿಗೆ, ನೀವು ಪರುಷದ ಗಂಡು ಆಗಬೇಕು" ಎಂದು ಶಿಫಾರ್ಸು ಮಾಡಿದ ವಿಮಲೆಗೆ, ಅಲ್ಲಮನ ಉತ್ತರವಿದು: 'ಕಬ್ಬಿಣವಾದರೂ ಪರವಾಯಿಲ್ಲ, ಪರುಷ ಮುಟ್ಟಿದೊಡನೆ ಚಿನ್ನವಾದೀತು, ಆದರೆ ಹಳೆ ಹಂಚು ಹೊನ್ನು ಆಗಲು ಸಾಧ್ಯವೆ ? ಒಂದು ಬೀಜವ ಬಿತ್ತಿ ಮೇಣ್, ಮತ್ತೊಂದು ಫಲವನು ಬಯಸಿ ಬಾತೆಡೆ ಬಂದುದಹುದೇ ? ಕನಸಿನಲ್ಲಿ ಚೇಳು ಕಚ್ಚಿದರೆ ನೋವಾತೆಂದು ನರಳಬೇಕೆ ? ಶಿವಾನುಭವದ ತತ್ವಜ್ಞಾನವಿಲ್ಲದೆ, ಬರಿಯ ತಾಮಸದ ಮದದಿಂದ ಸತ್ಫಲಗಳುಂಟಾಗುತ್ತವೆಯೆ' ? ಹೀಗೆ ನುಡಿದು ಮತ್ತೆ ಅದೃಶ್ಯನಾದನು.

ಅದರಿಂದ ಮಯಾದೇವಿ ತುಂಬ ದುಃಖಪಟ್ಟು ತಾನಿನ್ನು ಬದುಕುವುದಿಲ್ಲವೆಂದು ಹೇಳುತ್ತಿರುವ ಸಮಯಕ್ಕೆ ಸರಿಯಾಗಿ ಆಕೆಯ ತಾಯಿ ತಂದೆಗಳು ಮಗಳನ್ನು ಹುಡುಕಿಕೊಂಡು ಅಲ್ಲಿಗೇ ಬಂದರು. ವಿಚಾರವನ್ನೆಲ್ಲ ಕೇಳಿ ಮಮ್ಮಲ ಮರುಗಿದಳು. ವಿಮಳೆ ಅವರಿಗೆ ಮಾಯೆಯ ನಿಜ ವೃತ್ತಾಂತವನ್ನು ತಿಳಿಸಿ, ಅವರನ್ನು ಸಮಾಧಾನ ಪಡಿಸಿ ಮಾಯೆಯೊಂದಿಗೆ ಕೈಲಾಸಕ್ಕೆ ತೆರಳಿದಳು.

ಅಂತೂ ಮುಂದೆ ಶೂನ್ಯ ಸಿಂಹಾಸನದ ಅಧ್ಯಕ್ಷನಾಗುವ ಅಲ್ಲಮ ಪ್ರಭು ಮಾಯೆಯ ಮೋಹಕ್ಕೆ ಸಿಕ್ಕದೆ ಹೋದ ರೀತಿಯನ್ನು ಶ್ರೀ ವರದರಾಜ ಹುಯಿಲಗೊಳ ಅವರು ಮೂಲದ ಭಾವ ಕೆಡದ ರೀತಿಯಲ್ಲಿ ಗದ್ಯ ನಾಟಕ ರೂಪದಲ್ಲಿ ಚಿತ್ರಿಸಿ, ಓದುಗರಿಗೆ ವಿಶೇಷವಾಗಿ ವಿದ್ಯಾರ್ಥಿಗಳಿಗೆ ಉಪಕಾರ ಮಾಡಿರುತ್ತಾರೆ.

# ಬುದ್ಧ-ಬಸವ-ಗಾಂಧಿಯವರ ಸಮಾನ ವಿಚಾರಗಳು.

— ಸಿ. ಎನ್ ಬಸವರಾಜು.

'ಲಿಂ. ಶ್ರೀಮತಿ ಲಕ್ಷ್ಮೀದೇವಿ ನಾಗಣ್ಣ' ನಾಮಾಂಕಿತ ಪ್ರಬಂಧ ಸ್ಪರ್ಧೆಯಲ್ಲಿ ಬಹುಮಾನಿಕ ವಿದ್ಯಾರ್ಥಿ ಮಟ್ಟದ ಲೇಖನ. ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜಿನ ಸಾಹಿತ್ಯ III ತರಗತಿಯಲ್ಲಿ ಓದುತ್ತಿರುವ 'ಚಿನಂಬ' ನಾಮಾಂಕಿತರಾದ ಶ್ರೀ ಸಿ. ಎನ್. ಬಸವರಾಜು ಅವರು ಈ ಲೇಖನ ಬರೆದಿದ್ದಾರೆ.

—ಸಂ—

"ಏಕೋಪಿ ಪುಣ್ಯಂ ಕುರುತೇ ಫಲಂ ಭುಂಕ್ತೇ ಮಹಾ ಜನಾಃ" ಅರ್ಥಾತ್, ಒಬ್ಬನು ಮಾಡಿದ ಪುಣ್ಯವು ಅಥವಾ ಪುಣ್ಯದ ಕಾರ್ಯವು ಆದರ್ಶವು ಅನೇಕ ಜನಗಳಿಗೆ ಒಳ್ಳೆಯ ಫಲವನ್ನು ಭುಂಜಿಸಲು ಅನುಕೂಲವಾಗುತ್ತದೆ. ಅಂತೆಯೇ ಸತ್ಪುರುಷರ, ಮಹಾತ್ಮರ ಆದರ್ಶ, ಸಮಸ್ತ ಜೀವಿಗಳಿಗೂ ಸ್ಫೂರ್ತಿದಾಯಕ, ಫಲದಾಯಕವಾಗಿದೆ. ಅಂತಹ ಮಹಾತ್ಮರಲ್ಲಿ 'ರತ್ನತ್ರಯ' ಸದೃಶರಾಗಿ ಬೆಳಗಿದ ಜ್ಯೋತಿಗಳೆಂದರೆ— ಬುದ್ಧ, ಬಸವ ಮತ್ತು ಗಾಂಧೀಜಿ. ಇವರು ಆಯಾ ಕಾಲಕ್ಕೆ ತಕ್ಕಂತೆ ತಮ್ಮ ತಮ್ಮ ಅಸ್ತ್ರಗಳನ್ನು ಉಪಯೋಗಿಸಿ ಸಮಾಜವನ್ನು ತಿದ್ದಿದ ಮಹಾ ವ್ಯಕ್ತಿಗಳು. ಪ್ರಾಚೀನ ಕಾಲದ ಬುದ್ಧನಾದರೋ "ಸರ್ವೇ ಜನಾಸ್ಸುಖಿನೋಭವಂತು", ಅರ್ಥಾತ್, "ಎಲ್ಲಾ ಜನಗಳಿಗೂ ಸುಖವುಂಟಾಗಲಿ" ಎಂಬ ಉದ್ದೇಶದಿಂದ ಆಯುರ್ವೇದದಂತಹ, ಮೂಲ ಸಿದ್ಧೌಷದಿಯನ್ನು ಉಪದೇಶದ ಮೂಲಕ ಅಜ್ಞಾನವೆಂಬ ರೋಗವನ್ನು ಜನಗಳ ಮನಸ್ಸಿನಿಂದ ದೂರ ಮಾಡಲು ಶ್ರಮಿಸಿದ. ಅಂತೆಯೇ 'ದಯವೇ ಧರ್ಮದ ಮೂಲವಯ್ಯ' ಎಂಬುದನ್ನು ಸಂತರು, ಮಹಾತ್ಮರು, ಯೋಗಿಗಳು ಮಂತ್ರದಿಂದಲೇ ಮಹಾ ಪವಾಡಗಳನ್ನು ಮಾಡುವಂತೆ, ವಚನವೆಂಬ ಅಸ್ತ್ರದಿಂದ ಸಮಾಜದ ಡೊಂಕನ್ನು ತಿದ್ದಿದ ಮಹಾನುಭಾವ ಬಸವ. ಇನ್ನು ಗಾಂಧೀಜಿಯಾದರೋ ಆಧುನಿಕ ಯುಗದ ಚುಚ್ಚುಮದ್ದಿನಂತಹ (ಇಂಜಕ್ಷನ್ – Injection) 'ಅಹಿಂಸಾ ಪರಮೋಧರ್ಮಃ' ಎಂಬ ಅಸ್ತ್ರವನ್ನು ಉಪಯೋಗಿಸಿ ಸಮಾಜದ ಉದ್ಧಾರಕ್ಕಾಗಿ ದುಡಿದರು. ಅಂತೂ ಈ ಮೂವರು ವ್ಯಕ್ತಿಗಳ ಅಸ್ತ್ರಗಳ ರಚನೆ ಬಾಹ್ಯ ರೀತಿಯಲ್ಲಿ ಬೇರೆಯಾದರೂ ಆಂತರಿಕ ಸಾಧನೆ ಒಂದೇ ಆಗಿದೆ. ಒಟ್ಟಿನಲ್ಲಿ ಇವರು ಶ್ರಮಿಸಿದ ಕ್ಷೇತ್ರಗಳು ಬೇರೆಯಾದರೂ ಒಂದೇ ತೆರನಾದ ಹಣ್ಣುಗಳನ್ನು ಕೊಡುವ ವೃಕ್ಷದಂತೆ ಸರಿ ಸಮಾನವಾದ ಫಲಗಳನ್ನು ಕೊಡುಗೆಯಾಗಿ ಕೊಟ್ಟಿದೆ.

ಸೀಕೆ ಹೆಚ್ಚು ಪಾಲು ಸೇರಿದರೆ ಅಸಮಂಜಸವಾದರೂ, ಮೂವರು ಮಹಾತ್ಮರುಗಳ ವಿಷಯವಾಗಿ ಸಹಸ್ರಾರು ಕಿರಣಗಳಲ್ಲಿ ಒಂದು ಕಿರಣವನ್ನಾದರೂ, ಸೀರಿಕೆಯಲ್ಲಿ ಹೇಳಲೇ ಬೇಕಾಗಿರುವುದರಿಂದ ಸಮಂಜಸವೆನಿಸಬಹುದು.

೨

ಮಹಾನುಭಾವ ಬುದ್ಧನು ಮಾನವ ಕುಲದ ಕಲ್ಯಾಣಕ್ಕಾಗಿ ದುಡಿದ ಮಹಾನ್ ವ್ಯಕ್ತಿ. ಇವನು ಪೌರಾಣಿಕ ವ್ಯಕ್ತಿಯೂ ಅಲ್ಲ, ಪವಾಡಗಳ ಗುರುವೂ ಅಲ್ಲ, ಬುದ್ಧನು ಪ್ರಾಚೀನ ಕಾಲದವನು. ಬುದ್ಧನನ್ನು ಸಂತ, ಪ್ರವಾದಿಯೆಂದು ಹೇಳಹುದು. ಆದರೆ ಬಸವೇಶ್ವರನು ಪೌರಾಣಿಕ ವ್ಯಕ್ತಿಯಾದರೂ ಬುದ್ಧನಂತೆ ಸಂತ, ಪ್ರವಾದಿ. ರಾಜನೀತಿಜ್ಞ, ಲೌಕಿಕ ಜ್ಞಾನ ಪಡೆದವನಾಗಿದ್ದ. ಒಟ್ಟಿನಲ್ಲಿ ಬುದ್ಧ ಮತ್ತು ಬಸವರಿಬ್ಬರೂ ಮಹಾನ್ ಧಾರ್ಮಿಕ ಜ್ಯೋತಿಗಳು. ಗಾಂಧೀಜಿಯಾದರೂ ಸಮಾಜ ಸುಧಾರಕ, ಅಹಿಂಸಾ ದೂತ, ಆಧುನಿಕ ಕಾಲದ ಸಮಾಜೋದ್ಧಾರಕ ಶಿಲ್ಪಿ. ಬುದ್ಧನಂತೆ ಮಾನವ ಕಲ್ಯಾಣಕ್ಕೆ ದುಡಿದ ಮಹಾನುಭಾವ ಹೆಚ್ಚೇನು? ಮಾನವ ಕುಲದಕಲ್ಯಾಣದ ಮಂಗಳಮೂರ್ತಿ.

ಬುದ್ಧನೂ ಸಹ ಮಾನವನಾಗಿ ಮಾನವ ಕುಲದ ಕಲ್ಯಾಣಕ್ಕೆ ದುಡಿದ ಮಹಾನುಭಾವ. ಬಸವೇಶ್ವರನು ಮಧ್ಯ ಯುಗದಲ್ಲಿ ಅವತಾರವೆತ್ತಿದ ಪುಣ್ಯಪುರುಷನಲ್ಲದೆ ಮಹತ್ತರ ಕಾರ್ಯಗಳನ್ನು ಮಾಡಿದ್ದಾನೆ. ಈ ಮಹಾತ್ಮರುಗಳ ಪ್ರತಿಭೆ ಅವರ ಬಾಲ್ಯಗಳಿಂದಲೇ ಆರಂಭವಾಗುತ್ತದೆ. ಕಾರಣ ದೇವಾಂಶ ಸಂಭೂತರು. ಅದಿಲ್ಲದಿದ್ದರೆ ಇವರು ಮಹಾತ್ಮನೆಂಬ ಹೆಸರಿಗೆ ಅರ್ಹರಾಗುತ್ತಿರಲೇ ಇಲ್ಲ. ದೇವಾಂಶ ಸಂಭೂತರೆಂದು ಒಪ್ಪದಿದ್ದರೂ ಅವರು ಮಾಡಿರುವ ಸೇವೆ ಅಮೋಘ. ಬಾಲ್ಯದಿಂದಲೇ ಅವರು ಪರಮಾತ್ಮನನ್ನು ಅರ್ಥ ಮಾಡಿಕೊಂಡರು. 'ಜನರ ಸೇವೆಯೇ ಜನಾರ್ದನನ ಸೇವೆ" ಎಂದರಿತು ಕಾಲಕ್ಕೆ ತಕ್ಕಂತೆ ಶ್ರಮಿಸಿದರು. ಬಸವೇಶನಿಗೆ ಬಾಲ್ಯದಿಂದಲೇ ಶಿವನ ಧ್ಯಾನ, ಜಂಗಮ ಸಂಗಮ, ಇವೆಲ್ಲಾ ಅವನಿಗೆ ಬಂದಂತಹ ಹಿರಿಯ ಗುಣಗಳು. ಬುದ್ಧನ ಮನಸ್ಸು ವೈರಾಗ್ಯದೆಡೆಗೆ, ಲೋಕೋದ್ಧಾರಕ್ಕಾಗಿ ಚಲಿಸಿತು. ಗಾಂಧೀಜಿಯು ಬಾಲ್ಯದಿಂದಲೂ ತಪ್ಪು ಮಾಡಿದವರಾದರೂ ತಿದ್ದಿಕೊಂಡ ಮಾನವೀಗುಣದಿಂದ ದೈವೀಗುಣಕ್ಕೇರಿದರು. ಹೀಗೆ ಅವರಿಗೆ ಬಾಲ್ಯದಿಂದಲೇ ಬೆಳೆದು ಬಂದಂತಹ ದೊಡ್ಡ ಗುಣಗಳಿಂದ ಮಹಾತ್ಮರಾಗಲು ಯೋಗ್ಯರಾದರು.

ಬಾಲ್ಯದಿಂದಲೂ ಅವರ ಪ್ರಭಾವ ಅವರ ನೆಟ್ಟ ವಿಷಯಗಳತ್ತ ಹರಿಸಿದರ ಫಲವೇ ಇಂದು ನಮಗೆ ಮಾರ್ಗದರ್ಶನ. ಬುದ್ಧನು ಕೇವಲ 6 ವರ್ಷದವನಿದ್ದಾಗಲೇ 'ಬೆಳೆಯುವ ಸಸಿ ಮೊಳಕೆಯಲ್ಲಿ' ಎಂಬಂತೆ ಕುಶಾಗ್ರಮತಿಯಾಗಿದ್ದ. 12 ವರ್ಷಕ್ಕೇನೆ ಆತನ ಯೋಚನಾ ಲಹರಿ 'ಅಹಿಂಸಾ ಪರಮೋಧರ್ಮಃ" — 'ಸರ್ವೇ ಜನಾಃ ಸುಖಿನೋಭವಂತು" ಈ ಉಕ್ತಿಗಳನ್ನು ಪಠಿಸುತ್ತಾ ಸೂರ್ಯ, ಗಿಡ, ಹೂವು, ಮನುಷ್ಯನಲ್ಲಾಗುವ ಬದಲಾವಣೆ ಇವುಗಳನ್ನೆಲ್ಲಾ ಯೋಚಿಸಿ, ಸಮರ್ಪಕ ಉತ್ತರ ದೊರೆತಾಗ ಗ್ರಹಾನ್ವೇಷಣೆಗೆ ಹೋಗಿದ್ದ ಖಗೋಳ ವಿಜ್ಞಾನಿಗೆ ಹೊಸ ಗ್ರಹದ ಸೂಕ್ಷ್ಮತೆ ತಿಳಿದಾಗ ಪಡೆವ ಸಂತೋಷದಂತೆ ನಲಿಯುತ್ತಿದ್ದ. ಮುಂದೆ ಇದೇ ವಿಷಯದಲ್ಲಿ ಆತನು ಯೋಗಿಯಾಗಲು ತಳಹದಿಯಾಯಿತು. ಅದೇ ರೀತಿ ಉತ್ತಮ ಪುರುಷನಂತೆ ದಿಟ್ಟ ಹೆಜ್ಜೆಯನ್ನು ಹಿಂದೆಗೆಯಲಿಲ್ಲ. ವಿವಾಹದ ಹೊಸತರಲ್ಲಿ ಯಶೋಧರೆಯ ತೆಕ್ಕೆಯಲ್ಲಿ ರತಿಯಂತಹ ಹೆಂಡತಿಯ ತೋಳುಗಳಿಂದ ಬಂಧಿಸಲ್ಪಟ್ಟಂತಹ ಈ ಮನ್ಮಥ ರೂಪಿಯಾದ ಈ ಬುದ್ಧನಿಗೆ (ಸಿದ್ಧಾರ್ಥನಿಗೆ) ಮೊದಲೆಲ್ಲಾ ಈ ಜೀವನ ಅಮೃತವಾಗಿ ಕಂಡರೂ ಕೊನೆಗೆ ಇದೆಲ್ಲದರಿಂದಲೂ ವಿಮುಕ್ತನಾಗುತ್ತಾನೆ. ಕತ್ತರಿಸಿದ ಹಗ್ಗದಂತೆ ಬಾಂಧವ್ಯವನ್ನು ತೊರೆದು, ಷಡ್ರಸಗಳನ್ನು ತಿಂದ ನಾಲಿಗೆಯ ಆಸೆಯನ್ನೂ, ಸುಖದ ಸುಪ್ಪತ್ತಿಗೆಯನ್ನೂ ತ್ಯಜಿಸುತ್ತಾನೆ. ಇವೆಲ್ಲಾ ಏತಕ್ಕಾಗಿ ? ತಮ್ಮ ಸ್ವಾರ್ಥ ಸಾಧನೆಯನ್ನು ಮತ್ತು ಸುಖಗಳನ್ನು ತ್ಯಜಿಸಿದರೇ ತಾನೇ ಮಹಾತ್ಮನಾಗಿ, ಲೋಕೋದ್ಧಾರಕನಾಗಲು ಸಾಧ್ಯ. ಬುದ್ಧ ಸಿದ್ಧಾರ್ಥನಾಗಿದ್ದಾಗ ರಥಾರೂಢನಾಗಿ ಹೋಗುತ್ತಿದ್ದಾಗ, ರೋಗಿ, ಸತ್ತ ಹೆಣ, ಮುದುಕ, ಭಿಕ್ಷುಕ, ಇವೆಲ್ಲವನ್ನೂ ನೋಡಿ ಸಾರಥಿಯನ್ನು ಕೇಳಿದಾಗ ದೈವ ಪ್ರೇರಿತನಾದ ಸಾರಥಿ ಆತನಿಗೆ ಮನದಟ್ಟಾಗುವಂತೆ ಎಲ್ಲವನ್ನೂ ಸವಿಸ್ತಾರವಾಗಿ ಹೇಳಿದಾಗ ಮನಸ್ಸು 'ಹುಲ್ಲೆಯು ಹುಲಿಯಿಂದ ಹೆದರಿ ಓಡಿದಂತೆ ಚಂಚಲಿಸುತ್ತದೆ. ಸಾರಥಿಯು' ಈ ಮುದಿತನ ರೂಪನ್ನು ಅಪಹರಿಸುತ್ತದೆ. ಇಂದ್ರಿಯಗಳಿಗೆ ದುಃಖವನ್ನುಂಟುಮಾಡುತ್ತದೆ. ಶೋಕದಲ್ಲಿ ಮುಳುಗಿಸುತ್ತದೆ — ಇದೇ ಮುಪ್ಪು' ಎಂದು ಹೇಳುತ್ತಾನೆ. ಆಗ ಬುದ್ಧನು (ಸಿದ್ಧಾರ್ಥನು) ಈ ಸುಖದ ಹಿನ್ನೆಲೆಯಲ್ಲಿ ಕಷ್ಟವಡಗಿದೆ; ಕಷ್ಟನಿದ್ದೆಡೆಯಲ್ಲಿ ಸುಖ ಮರೆ ಮಾಚಿರುತ್ತದೆ. ಅರ್ಥಾತ್ 'ಸುಖ ದುಃಖಗಳು ಒಂದೇ ನಾಣ್ಯದ ಎರಡು ಮುಖಗಳು.' ಇದನ್ನು ತಿಳಿದ ಸಿದ್ಧಾರ್ಥ ಬುದ್ಧನಾಗಲು ಪ್ರಯತ್ನಿಸಿ ಮಹಾನ್‌ಯೋಗಿಯಾಗುತ್ತಾನೆ. ಹೀಗೆ ನಾವು ಮಹಾತ್ಮರ ಸೂಕ್ಷ್ಮತೆಯನ್ನು ಹೆಜ್ಜೆ ಹೆಜ್ಜೆಗೂ ದೃಷ್ಟಿಸಿ ನೋಡುತ್ತಿರಬೇಕು.

ಬುದ್ಧನಂತೆ, ಬಸವೇಶ ಮತ್ತು ಗಾಂಧೀಜ ದೂರದರ್ಶಿಗಳು. ಅವರೂ ಸಹ ಯೋಚನಾ ಲಹರಿಯಲ್ಲಿ ತಲ್ಲೀನರಾಗಿ ಮನಸ್ಸನ್ನು ಶುದ್ಧಿ ಮಾಡಿಕೊಂಡವರು. ಬಸವೇಶನು ಮಹಾಮಂತ್ರಿ ಪದವಿಯನ್ನು ಹೊಂದಿದ್ದರೂ ಕಾಯಕವನ್ನು ಬಿಡಲಿಲ್ಲ. ಜಂಗಮ ದಾಸೋಹನನ್ನು ತಪ್ಪಿಸಲಿಲ್ಲ. ಗುಲಾಬಿ ಹೂವು ಮುಳ್ಳುಗಳ ಮಧ್ಯೆ ಬೆಳೆ

ದರೂ ಅಂದವಾಗಿ ಕಾಣುವಂತೆ ಆಗಿನ ರಾಜಕಾರಣಿಗಳ ಮಧ್ಯೆ ಬೆಳೆದು ತಮ್ಮ ವ್ಯಕ್ತಿತ್ವವನ್ನು ಕಾಪಾಡಿಕೊಂಡರು ಗಾಂಧೀಜಿಯವರು ಆಂದೋಲನದಲ್ಲಿದ್ದಾಗಲೂ ಯಾವ ಪರಿವೆಯೂ ಇಲ್ಲದೆ ಕಾಯಕ, ಪ್ರಾರ್ಥನಾದಿ ದಿನಚರಿ ಯಾಗಿ ನಡೆಯುತ್ತಲೇ ಇದ್ದವು. ಬಸವೇಶ ಮತ್ತು ಗಾಂಧೀಜಿಯವರು, ಸಂಸಾರಿಗಳಾಗಿದ್ದರೂ ಅವರು "ಕಮಲವು ಕೆಸರಿನಲ್ಲಿ ಬೆಳೆದರೂ ನೀರಿನಿಂದ ನಿರ್ಲಿಪ್ತವಾ ದಂತೆ" ಶುದ್ಧ ಆಚಾರಿಗಳಾಗಿದ್ದರು.

ಬುದ್ಧನ ಉಪದೇಶ ಬಸವನ ವಚನದಂತೆ ಜನಗ ಳನ್ನಾಕರ್ಷಿಸುತ್ತದೆ. ಉಪದೇಶದ ಅಮೃತಧಾರೆ ಅಜ್ಞಾ ನಿಗಳಿಗೆ ಜ್ಞಾನದ ತಿಲಕವಾಗಿ' ಶೋಭಿಸುತ್ತದೆ. ಆತನ ಉಕ್ತಿಗಳು ಜನಗಳ ಮನಸ್ಸಿನಲ್ಲಿ 'ಇಬ್ಬನಿ ಹೂವನ್ನು ಸ್ಪರ್ಶಿಸುವಂತೆ" ಪ್ರೇಮದಿಂದ ನಾಟಿದವು. ಬುದ್ಧನು ಬೋಧಿಸಿದ ರೀತಿ ನೀತಿಗಳು 'ತಾಯಿಯ ಮೊಲೆಯ ಹಾಲಿನಂತ" ಎಲ್ಲರಿಗೂ ಅತ್ಯವಶ್ಯಕವಾಗಿ ಪ್ರಿಯ ವಾದವು. ಆತನು ಬೋಧಿಸಿದ 'ಅಮೃತ ಪುತ್ರರೆ, ಸೋದ ರರೇ, ಮಾನವನೇ ಮಾನವನ ದೇವತೆ,' ಮಾನವನ ದುಃಖಕ್ಕೆ ಕಾರಣ ಆತ್ಮವಲ್ಲ. ಪ್ರಕೃತಿಯೂ ಅಲ್ಲ. ಮಾನವನ ದುಃಖಕ್ಕೆ ಆತನು ಬೆಳಸಿಕೊಳ್ಳುವ 'ತೃಷೆಯೇ ದುಃಖಕ್ಕೆ ಕಾರಣ." ಇದೆಲ್ಲವನ್ನೂ ದಾಟಿದರೆ ಸ್ವರ್ಗದ ಬಾಗಿಲು ತಾನಾಗಿಯೇ ತೆರೆದು ಸ್ವಾಗತಿಸುತ್ತದೆ. ಬುದ್ಧನು ಅಷ್ಟಾಂಗ ಮಾರ್ಗವನ್ನು ಬೋಧಿಸಿದನು. "ಅಮೃತದ ಪುತ್ಥಳಿಗಳೇ ನಾವೆಲ್ಲರೂ ದೇವನೊಬ್ಬನ ಮಕ್ಕಳು. ನಮ್ಮ ಇಹ, ಪರಗಳನ್ನು ಚೇತನಾಮಯ ವಾಗಿಟ್ಟುಕೊಳ್ಳುವುದು ನಮ್ಮ ಕೈಲಿದೆ. ಅರ್ಥ, ಕಾಮ ಗಳು ನಮ್ಮ ಅಧೀನವಲ್ಲ; ಕೇವಲ ಧರ್ಮ ಮೋಕ್ಷಗಳೇ ನಮ್ಮ ಅಧೀನವು." ಹೀಗೆ ಹೇಳುತ್ತಿದ್ದಾಗ ಕೆಲವು ವಿದ್ವಾಂಸಾಜ್ಞರು ಆತನ ಮಹತ್ವವನ್ನರಿಯದೆ, ಪಾಷಂಡಿ ಶುಷ್ಕವಾದಿ, ಚಾಂಡಾಲ ಎಂದು ಹೀನಾಯ ವಾಗಿ ಬೈದರೂ ದಯಾಮೂರ್ತಿಯಾಗಿ, ಕಾರುಣ್ಯ ಮೂರ್ತಿಯಾಗಿ ಅವರನ್ನು ಅಜ್ಞಾನದಿಂದ ಜ್ಞಾನದೆಡೆಗೆ ಕಣ್ಣನ್ನು ತೆರಸಿದ. ಇಂತಹ ಪ್ರಸಂಗಗಳಿಂದ ಅವರ ಮಹತ್ವ ಹೆಚ್ಚುತ್ತದೇ ಹೊರತು ಕುಗ್ಗುವುದಿಲ್ಲ—ತಗ್ಗು ವುದಿಲ್ಲ. ಅವರ ಮಹತ್ವವನ್ನು ಒರೆ ಹಚ್ಚುವ ಒರೆಗಲ್ಲು ಗಳಾಗುತ್ತವೆ. ಜೇನು ಹುಟ್ಟು ಕೀಳುವವನು ಪ್ರಯತ್ನ ಮಾಡಿ — ಕಷ್ಟಪಟ್ಟು ಜೇನನ್ನು ಹೊರತೆಗೆದಂತೆ ನಾವು ಇಂತಹ ಮಹಾತ್ಮರುಗಳ ಮಹತ್ವವನ್ನು ಸೂಕ್ಷ್ಮವಾಗಿ ಅರಿಯಬೇಕು. ನಾವು ಮೂರ್ಖರಾಗಿ ವರ್ತಿಸುವುದು ಹೇಯವಾದ ಕೆಲಸ. ಆದರೂ ಅವರ ಕರ್ತವ್ಯವನ್ನು ಬಿಡುವುದಿಲ್ಲ.

ದುಷ್ಟರನ್ನೂ ಇಂತಹ ಮಹಾತ್ಮರು ತಿದ್ದುತ್ತಾರೆ. ಮಹಾನ್ ಬುದ್ಧ ದೇವನು ಅಂಗುಲಿಮಾಲನೆಂಬ ಕಟುಕನಿಗೆ ಜ್ಞಾನ ದೀಕ್ಷೆಯನ್ನು ಕೊಟ್ಟ. ಅಂತೆಯೇ ಪುತ್ರವಾತ್ಸಲ್ಯಮಯಿ ಯಾದ ಕಿಸಾ ಗೌತಮಿಗೆ ವೈರಾಗ್ಯ ದೀಕ್ಷೆ ಹಾಗೂ ಜ್ಞಾನ ದೀಕ್ಷೆಯನ್ನು ಕೊಟ್ಟ. ಹೀಗೆಯೇ ಮಹಾತ್ಮರುಗಳ ಮಹಿ ಮೆಯಿಂದ ಮಹದುಪಕಾರವಾಗುತ್ತಿದೆ. ಆದ್ದರಿಂದಲೇ ಬುದ್ಧನ ಶಿಷ್ಯರು ಆಗ ದಿನೇ ದಿನೇ ಹೆಚ್ಚುತ್ತಾ ದೇಶದ ಮೂಲೆ ಮೂಲೆಗಳಲ್ಲಿಯೂ ಪ್ರತಿಧ್ವನಿಸುವಂತೆ ಸ್ತೋತ್ರ ಮಾಡುತ್ತಾ ದೀಕ್ಷಾಬದ್ಧರಾಗಿ

'ಬುದ್ಧಂ ಶರಣಂ ಗಚ್ಛಾಮಿ
ಸಂಘಂ ಶರಣಂ ಗಚ್ಛಾಮಿ
ಧರ್ಮಂ ಶರಣಂ ಗಚ್ಛಾಮಿ'

ಎಂದು ಪಠನ ಮಾಡುತ್ತಾ ತಿರುಗುತ್ತಿದ್ದರು.

೩

ಇನ್ನು ವಚನ ಸುಧಾಕರ, ಮಹಾತ್ಮ ಬಸವಣ್ಣನ ಕಾಲದಲ್ಲಾದರೂ ಅಜ್ಞಾನದಿಂದ ಕೂಡಿದ, ಪರಮಪಾ ವನಮೂರ್ತಿಯಾದ ಪರಶಿವನನ್ನು ಅರ್ಥಮಾಡಿಕೊಳ್ಳ ಲಾಗದ, ಜನರಿಂದ ಭಕ್ತಿಯೇ ಕುಸಿದು ಬೀಳತಕ್ಕಂತಹ ಪರಿಸ್ಥಿತಿಯಲ್ಲಿ ಜ್ಞಾನದ ಕಾಡಿಗೆಯ ಮೂಲಕ, ವಚನಗಳ ಮೂಲಕ ತಮ್ಮ ಕಡೆಗೆ ಸೆಳೆದುಕೊಂಡು ಕಣ್ಣು ತೆರೆಸಿದರು

ಸುಮಾರು 800 ವರ್ಷಗಳ ಹಿಂದೆಯೇ ಸಮಾ ಜಕ್ಕೆ ಬೇಕಾದ ಪವಿತ್ರ ಕಟ್ಟಳೆಗಳನ್ನು ಮಾಡಿದರು. ಸಮಸ್ತ ಇತಿಹಾಸದಲ್ಲೇ ಪುಣ್ಯವಾದ, ಚಿರಸ್ಮರಣೀಯ

ವಾದ ಅವತಾರ ಬಸವಣ್ಣನವರದು. ಸಮಸ್ತ ಭಾರತದ ಇತಿಹಾಸದಲ್ಲೇ ಸುವರ್ಣಾಕ್ಷರಗಳಿಂದ ಬರೆಯಲ್ಪಟ್ಟ ಪವಿತ್ರ ಕಾಲ. ಈ ದಿವ್ಯಜ್ಞಾನಿ ಬುದ್ಧನಂತೆ ಮಹತ್ತರ ಬದಲಾವಣೆಗಳನ್ನು ಮಾಡಿದ ಕ್ರಾಂತಿಕಾರ. ಗಾಂಧೀಜಿಯೂ ಸಹ ಪರಶಿವನು ಮೂರು ಕಣ್ಣುಗಳನ್ನು ಹೊಂದಿರುವಂತೆ ಎರಡು ಜಗಜ್ಯೋತಿಗಳ ಮಧ್ಯೆ ಪ್ರಕಾಶಿಸುತ್ತಿದ್ದಾರೆ. ಇವರು ತ್ರಿಮೂರ್ತಿಗಳಂತೆ ಆರಾಧಿಸಲು ಯೋಗ್ಯರಾಗಿದ್ದಾರೆ. ಬ್ರಹ್ಮಸ್ವರೂಪಿ ಬುದ್ಧ, ಪರಶಿವ ಸ್ವರೂಪಿ ಬಸವೇಶ ಹಾಗೂ ವಿಷ್ಣು ಸ್ವರೂಪಿ ಗಾಂಧೀಜಿ.

ದಿವ್ಯ ಜ್ಞಾನಿ ಬಸವೇಶ್ವರ ಸಮಾಜದ ಮೇಲು ಕೀಳುಗಳ ವಿಷಮತೆಯನ್ನು ಕಂಡು ಕೆರಳಿದ ಉಗ್ರಕ್ರಾಂತಿಕಾರಿ. ಜನತೆಯ ದುಃಖ ಕಂಡು ಕಂಬನಿ ಸುರಿಸಿದ ಲೋಕ ಸಂಸಾರಿ. ಧರ್ಮ ಮುಖವಾಡದ ಹಿಂದಿದ್ದ ಸ್ವಾರ್ಥವನ್ನು ಖಂಡಿಸಿದ ನಿಷ್ಠುರವಾದಿ. ಸರ್ವ ಸಮಾನತೆಗೆ ಸರ್ವ ಸಮಾನತೆಯ ಸಮಾಜ ನಿರ್ಮಿಸಲು ಪಣತೊಟ್ಟ ಸುಧಾರಕ ಹಾಗೂ ಧರ್ಮಬೋಧನೆಗೆ ಜನತಾವಾಣಿಯಲ್ಲಿ ಅಮೂಲ್ಯ ವಚನಗಳನ್ನು ರಚಿಸಿದ ಕವಿ ಪುಂಗವ-ಕಲಿಶ್ರೇಷ್ಠ.

ಶುದ್ಧ ಚಾರಿತ್ರ್ಯ, ಸದಾಚಾರ, ಸದ್ವರ್ತನೆಗಳೇ ಧರ್ಮದ ಆಧಾರ ಸ್ಥಂಭವೆಂದು ಈತ ಸಾರಿದ. 'ದಯವೇ ಧರ್ಮದ ಮೂಲವಯ್ಯ' ಎಂಬ ಮಹಾವಾಕ್ಯವನ್ನು ನಾಡಿನಾದ್ಯಂತ ಪ್ರತಿಧ್ವನಿಸುವಂತೆ ಬಿರುಸಾದ ಡಂಗುರದಿಂದ ಜಯಭೇರಿ ಹಾಕಿದ. ಇಡೀ ಮಾನವ ಕೋಟಿಯನ್ನೇ ಬಿಗಿದಪ್ಪುವ ಸರ್ವ ಸಮಾನತಾಭಾವದಿಂದ ಹೊರ ಹೊಮ್ಮಿದ ವಚನಗಳ ಮೃದು ಮಧುರ ಉಪದೇಶಗಳ ಅಮೃತದ ಧಾರೆ. ಇವು 'ಕಬ್ಬಿಣವನ್ನು ಆಕರ್ಷಿಸುವ ಆಯಸ್ಕಾಂತ"ದಂತೆ, "ಸೂರ್ಯಕಾಂತಿಯ ಹೂವು ಸೂರ್ಯನಿದ್ದೆಡೆ ತಿರುಗುವಂತೆ" ಭಕ್ತ ಕೋಟಿ ಬಸವೇಶನ ಕಡೆ ಸೆಳೆಯಿತು. ಆತನ ಉಪದೇಶಗಳು ಸಮಾಜದ ಡೊಂಕನ್ನು ತಿದ್ದುವ ಅಸ್ತ್ರಗಳಾದವು. 'ತೀಕ್ಷ್ಣ ವಿಡಂಬನೆ, ಉಗ್ರ ಎಚ್ಚರಿಕೆ" ತುಂಬಿದ್ದವು.

ಬಸವಣ್ಣನವರ ವಚನಗಳು ಲೋಕಾನುಭವ ಹೊತ್ತ ರಸಭರಿತವಾದ ಕಾವ್ಯ ಸಂಪತ್ತಾಗಿವೆ. ಬುದ್ಧನ ಉಪದೇಶದಂತೆ; ಗಾಂಧೀಜಿಯ ಅಹಿಂಸಾಧರ್ಮೋಪದೇಶದಂತೆ ಸಾರಪೂರ್ಣವಾಗಿದೆ. ಇವರು ಮಾಡಿದ್ದೆಲ್ಲ ಸಾಹಿತ್ಯದ ಬೆಳವಣಿಗೆಯಲ್ಲಿ ಬೆಳಕನ್ನು ಬೀರುವ ಜ್ಯೋತಿಯಂತೆ ಪ್ರತಿಭೆಯ ಬೆಳಕನ್ನು ಹೊಂದಿದ ಕನ್ನಡದ ಸೊತ್ತಾಗಿದೆ. ಗಾಂಧೀಜಿಯು ಇಂಗ್ಲೀಷಿನಲ್ಲಿಯೂ ಅನುಪಮ ಮೇಧಾವಿಯೆಂಬುದನ್ನು ನಾವು ಮರೆಯುವಂತಿಲ್ಲ. ಇವರೆಲ್ಲರಲ್ಲಿ ಅಡಗಿದ್ದ ಕಾವ್ಯ ಸಂಪತ್ತು, ಮೇರು ಪರ್ವತದಂತೆ ಪವಿತ್ರವೂ, ಋಗ್ವೇದದಂತೆ ಶ್ರೇಷ್ಠವೂ, ಸಾಗರದಂತೆ ವಿಸ್ತಾರವೂ ಆಗಸದಂತೆ ಅಗಲವೂ ಆಗಿ ಉಚ್ಚಮಟ್ಟದಲ್ಲಿ ಬೆಳಗುತ್ತಿವೆ.

ಈ ಪವಿತ್ರ ವಿಶಾಲ ಗಂಗಾವಾಹಿನಿಯಲ್ಲಿ ಬಡವ-ಬಲ್ಲಿದ, ಉಚ್ಚ - ನೀಚ. ಬ್ರಾಹ್ಮಣ-ಶೂದ್ರ, ಹಿರಿಯ-ಕಿರಿಯ ಹಾಗೂ ಗಂಡು - ಹೆಣ್ಣೆಂಬ ಭೇದ - ಭಾವಗಳ ಕೊಳೆ ದೂರ ಸಾಗಿದೆ. ಜಾತಿ - ಕುಲಗಳ ಸೊಲ್ಲಡಗಿಸಿದೆ. ಇಹ-ಪರಗಳ ಭ್ರಾಂತಿ ಬಿಡಿಸಿದೆ. ತ್ರಿಕರಣ ಶುದ್ಧಿಯೇ ಈ ಧರ್ಮಗಳ ಮೂಲ ಸೂತ್ರ. ಈ ಮೂವರ ಗುರಿಯೂ ಒಂದೇ ಆಗಿದೆ.

ಬಸವೇಶ್ವರನ ಉಕ್ತಿ "ಮಾತನಾಡಿದರೆ ಲಿಂಗ ಮೆಚ್ಚಿ ಅಹುದೆನಬೇಕು' ಎಂಬುದು ಎಲ್ಲ ಕಾಲಕ್ಕೂ ಅನ್ವಯಿಸುವ, ಸಮಾಜಕ್ಕೆ ಬೇಕಾದ ನೀತಿಯುಕ್ತಿಯಾಗಿದೆ. 'ಮಾತು ಹೆಚ್ಚಿದರೆ ದ್ವೇಷ ಹೆಚ್ಚುತ್ತದೆ' ಎಂಬುದನ್ನು ನಾವು ಇದರಿಂದ ತಿಳಿಯುವ ಜ್ಞಾನದ ಬೆಳಕು. ಗಾಂಧೀಜಿಯೂ ಇದೇ ಮಾತನ್ನು ಒತ್ತಿ - ಒತ್ತಿ ಹೇಳಿದ್ದಾರೆ. ಮಾನವನು ಬಾಹ್ಯಾಡಂಬರನಾಗದೆ, ಅಂತರಂಗದ ಪರದೆಯನ್ನು ದಾಟಿ ಶುದ್ಧ ಚಾರಿತ್ರ್ಯಪರನಾಗಬೇಕು. ಅಂತರಂಗದ ಶುದ್ಧಿಯಿಲ್ಲದಿದ್ದರೆ 'ಮಜ್ಜನವಿಲ್ಲದ ಪೂಜೆಯಂತೆ' ಶೋಭಿಸುವುದಿಲ್ಲ. ಬಸವೇಶನು ಅಸ್ಪೃಶ್ಯತಾ ನಿವಾರಣೆಗಾಗಿ, ಹರಿಜನ - ಗಿರಿಜನರ ಸಹಕಾರ - ಸಮಾನತೆಗಾಗಿ ಹೋರಾಡಿದ್ದಾನೆ. ಅವರ ದೃಷ್ಟಿಯಲ್ಲಿ ಕೀಳು - ಮೇಲುಗಳ ತಾರತಮ್ಯವಿರಲಿಲ್ಲ. ಆದ್ದರಿಂದಲೇ — 'ಕೊಲ್ಲುವನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ' ಎಂದೂ 'ಆಚಾರವೇ ಸ್ವರ್ಗ, ಅನಾಚಾರವೇ ನರಕ'

ಎಂದು ಸಾರುತ್ತಾ ಭೇದ - ಭಾವದ ಗೋಡೆಯನ್ನು ಹೊಡೆದುಹಾಕಿದರು. 'ಮೃದು ವಚನಂಗಳೇ ಸಕಲ ಜಪ-ತಪಂಗಳಯ್ಯಾ" ಎಂಬುದಾಗಿ ತಿಳಿಸಿದರು. ಹಾಗೆಯೇ ಮತ್ಸರಾದಿಗಳನ್ನು ನೋಡಿ 'ಮನೆಯೊಳಗಣ ಕಿಚ್ಚು ಮನೆಯ ಸುಡುವಂತೆ, ಮನದೊಳಗಿನ ಕಿಚ್ಚು ಮನವ ಸುಡುವುದು" ಎಂದು ಎಚ್ಚರಿಸಿದರು. "ನುಡಿಗೆ ತಕ್ಕಂತೆ ನಡೆ ಕಂಡರೆ ಕೂಡಲ ಸಂಗಮನ ಅಪ್ಪಿಗೆಗೆ ಸ್ವಾಗತ್ವವು ತುಂಬಿದೆ" ಎಂದು ಹೇಳಿ ಕರ್ತವ್ಯ ನಿಷ್ಠೆಯ 'ಕಾಯಕವೇ ಕೈಲಾಸ"ದ ಮಹಿಮೆಯನ್ನು ತಿಳಿಸಿದರು. ಸಹಕಾರದ ಸಮಾನತೆಗೆ ಬಹಳ ಹೆಣಗಾಡಿದರು. ಇವೆಲ್ಲವೂ ಅವರ ಅನುಭವ ತುಂಬಿದ ಅಮೃತದ ಕೊಡದಲ್ಲಿನ ಅಮೃತ ಮಯ ಪಾನೀಯ. ಇವರ ವಾಣಿ ಅಮೃತವಾಣಿಯೆಂದು ಹೇಳಬಹುದು. 800 ವರ್ಷಗಳ ಹಿಂದೆಯೇ ಹರಿಜನರ ಉದ್ಧಾರಕ್ಕಾಗಿ ದುಡಿದ ಬಸವನು ಜಗದ ಅಭಿನಂದಾರ್ಹ. ಸ್ತ್ರೀಯರ ಸಮಾನತೆಗೆ ಶ್ರಮಿಸಿದ. ಗಾಂಧೀಜಿಯಂತೆ ಹರಿಜನರಿಗಾಗಿಯೇ ಕ್ರಾಂತಿಯನೆಬ್ಬಿಸಿದ. "ಎಲೆ ಕೂಡಲ ಸಂಗಮದೇವ ನಿನ್ನ ನಂಬದವನೇ ಹೊಲೆಯ" ಎಂದು ಪರಿಗಣಿಸಿದರು. ಬುದ್ಧನಂತೆ ಪ್ರಾಣಿಗಳಲ್ಲಿ ದಯಾಪರ ರಾಗಿದ್ದನು. ಇವೆಲ್ಲವೂ ಸಮಾಜಕ್ಕೆ ತಿಲಕ ಪ್ರಾಯವಾಗಿವೆ. ಅವರು ಮಾಡಿದ ಅಸ್ಪೃಶ್ಯತಾ ನಿವಾರಣೆ ಇಂದಿನ ಸಮಾಜಕ್ಕೂ ಬೇಕಾಗಿದೆ. ಅವರು ತಮ್ಮ ವಚನಗಳಲ್ಲಿ ಹೆಚ್ಚಾಗಿ ಅಸ್ಪೃಶ್ಯರನ್ನೇ ಕೊಂಡಾಡಿ, ಕಕ್ಕಯ್ಯ, ಚಿಕ್ಕಯ್ಯಾದಿಗಳಲ್ಲಿ ಭಕ್ತಿ ಭಾಂಡಾರಿಯಾಗಿದ್ದರೂ, ಭಿಕ್ಷೆ ಬೇಡಿರುವುದು ಅಭಿನಂದಾರ್ಹ. ಕುಲದ ಲೆಕ್ಕವನ್ನು ಹಾಕದೆ ಹರಿಜನರ ಹರಳಯ್ಯನ ಮಗ ಶೀಲವಂತನಿಗೆ ಬ್ರಾಹ್ಮಣ ಕುವರಿಯನ್ನು ಕೊಟ್ಟು ಶರೀರ ಸಂಬಂಧ ಮಾಡಿಸಿದ.

> **ಆವ ಕುಲವಾದರೇನು ? ಶಿವಲಿಂಗವಿದ್ದವನೇ ಕುಲಜನು ! ಕುಲವನರಸುವರೆ ಶರಣರಲ್ಲಿ ಜಾತಿ ಸಂಕರನಾದ ಬಳಿಕ? ಒಕ್ಕುದ ಕೊಂಬೆನವರಲ್ಲಿ ಕೂಸ ಕೊಡುವೆ'.**
>
> —ಬಸವಣ್ಣನ ವಚನ ಸಂಗ್ರಹ.

ಎಂದು ನಡಿದಂತೆ ನಡೆದು ತೋರಿಸಿದರು. ಹೊಲಗೇರಿಯನ್ನು 'ಹಿರಿಯ ಮಾಹೇಶ್ವರ ಕೇರಿ" ಎಂದು ಪರಿಗಣಿಸಿದರು. ಇದರಿಂದ ಅವರ ಹೃದಯದಾಳದ ಅರಿವು ನಮಗಾಗುತ್ತದೆ. ಅವರಿಗೆ ಬೇಕಾದುದು ಸಮಾಜದ ಉದ್ಧಾರ ಭಕ್ತರ ಸಹವಾಸ. ಬುದ್ಧನೂ ಇವರ ತತ್ವವನ್ನೇ ಉಪಯೋಗಿಸಿಕೊಂಡು ಸಮಸ್ತ ರಾಜ್ಯವನ್ನೂ, ಐಶ್ವರ್ಯವನ್ನೂ ತ್ಯಾಗಮಾಡಿ ಮಹಾನ್ ತ್ಯಾಗಿ, ಯೋಗಿಯಾದ. ಬಸವೇಶ್ವರನು ಅಧಿಕಾರ ಪದವಿಯನ್ನು ತಿರಸ್ಕರಿಸಿದ. ಅದು ಕೇವಲ ಭೂಷಣವೇ ಆದರೂ ಬಾಹ್ಯ ರೂಪದಲ್ಲಿ, ಹಿನ್ನೆಲೆಯಲ್ಲಿ ದೂಷಣವೂ, ಪಿತೂರಿಗಳು ನಡೆಯುತ್ತಿರುತ್ತವೆ ಎಂಬುದನ್ನು ಬುದ್ಧನಂತೆ ಅರ್ಥ ಮಾಡಿಕೊಂಡನು. ಗಾಂಧೀಜಿಯು ಸಹ ರಾಜಕೀಯದಲ್ಲಿ ಪ್ರವೇಶಿಸಿದರೂ ಅಧಿಕಾರ ದಾಹಕ್ಕೆ ಇಚ್ಛೆ ಪಡಲಿಲ್ಲ. ಹೀಗೆ ಮಹಾತ್ಮರು ಅಧಿಕಾರದಲ್ಲಿ ಪ್ರವೇಶಿಸದಿದ್ದರೂ ಅವರಿಂದ ಜನಗಳು ಆಕರ್ಷಿಸಲ್ಪಡುತ್ತಾರೆ. ಏತಕ್ಕಾಗಿ? ಅವರಲ್ಲಿನ ಒಳ್ಳೆಯ ಅಮೃತಪ್ರಾಯವಾದ ನುಡಿಮುತ್ತುಗಳಿಗೆ. ಜಂಗಮ ರೂಪಿ ಬಸವನನ್ನು "ಅಣ್ಣ, ಬಸವಣ್ಣ" ಎಂದು ಪ್ರಭುದೇವರೂ ಸಂಬೋಧಿಸುತ್ತಿದ್ದರು. ಬಸವಣ್ಣ ಮರ್ತ್ಯ ಲೋಕಕ್ಕೂ ಶಿವಲೋಕಕ್ಕೂ ನಿಚ್ಚಣಿಕೆಯಾಗಿದ್ದ ಪುರುಷ.

೪

ಇದೇ ರೀತಿ ಗಾಂಧೀಜಿಯೂ ಜನಗಳ ಮತ್ತು ದೇವರ ಮಧ್ಯೆ ಅಚಲ ವಿಶ್ವಾಸವನ್ನಿಟ್ಟ ವ್ಯಕ್ತಿ. ಭಾರತ ಪರಕೀಯರ ಕೈಯ್ಯಲ್ಲಿ ದಾಸ್ಯದ ಸ್ಫಂಕೋಲೆಯಲ್ಲಿ ತೊಳಲಿ ಬಳಲುತ್ತಿದ್ದಾಗ ಅವರು ಮಾಡಿದ ಸಾಧನೆ 'Blood less revolution' ಅರ್ಥಾತ್, ರಕ್ತಪಾತ ರಹಿತ ಕ್ರಾಂತಿ. ಕೇವಲ ಶಾಂತಿಯೆಂಬ ಅಸ್ತ್ರದಿಂದ. ವಸಿಷ್ಠರ ಮುಂದೆ ವಿಶ್ವಾಮಿತ್ರನ ರಾಜತ್ವ ಹೇಗೆ ಶೋಭಿಸಲಿಲ್ಲವೋ ಹಾಗೆಯೇ ಶಾಂತಿಯೆಂಬ ಗಾಂಧೀಜಿಯ ಬ್ರಹ್ಮ ದಂಡದ ಮುಂದೆ ಸುಶೋಭಿಸಲಿಲ್ಲ. ಅನೇಕ ಉಪವಾಸ, ಸತ್ಯಾಗ್ರಹ, ಆಂದೋಲನ, ಮುಂತಾದ ಕಾರ್ಯಗಳನ್ನೆಸಗಿದರು. ಏತಕ್ಕಾಗಿ ? ಜನತೆಯ ಉದ್ಧಾರಕ್ಕಾಗಿ. ಕಾರಣ ಇವರೂ ಸಹ ಬುದ್ಧ, ಬಸವರಂತೆ ಲೋಕ ಕಲ್ಯಾಣಕ್ಕಾಗಿ ಅವತರಿಸಿದ ಮಹಾ ಸತ್ಪುರುಷ. ಎಲ್ಲರೂ ಶ್ಲಾಘನೀಯವಾಗಿ ಯೋಚಿಸಬೇಕಾದ ವಿಷಯವೆಂದರೆ ಅವರು ಮಾಡಿದ ಮಹತ್ಸಾಧನೆ: ಹರಿಜನರ ಉದ್ಧಾರ, ಗ್ರಾಮ

ಗಳ ಉದ್ಧಾರ. ಅವರು ಹೇಳಿದ್ದಾರೆ 'Villages are the back bones of the nation' ಅರ್ಥಾತ್ "ಹಳ್ಳಿಗಳೇ ರಾಷ್ಟ್ರದ ಬೆನ್ನೆಲುಬು. ಇದರ ಫಲವಾಗಿ ಕಾರ್ಯ ಸಾಧಿಸಲು ದುಡಿದು, ಶ್ರಮವಹಿಸಿ ಫಲವನ್ನನು ಭವಿಸುವಂತೆ ನಮ್ಮೆಲ್ಲರಿಗೂ ಆದರ್ಶವಾಗಿದ್ದಾರೆ. ಒಟ್ಟಿನಲ್ಲಿ ಮಹಾಭಾರತದ ಧರ್ಮಜನಂತೆ ಅಭಿನಂದನಾರ್ಹನಾಗಿದ್ದಾನೆ. ಸಮಾಜ ಸುಧಾರಕನಾಗಿ ಶ್ರಮಿಸಿದ್ದಾನೆ. ರಾಜಕೀಯ ರಂಗದಲ್ಲೂ ಸೇವೆ ಸಲ್ಲಿಸಿದ. 'ಪ್ರಾರ್ಥನೆ ಮತ್ತು ಕಾಯಕದ" ಮಹತ್ವವನ್ನು ಸಾರಿದ. "ಪ್ರಾರ್ಥನೆಯಿಂದಲೆ ಜೀವನ್ಮುಕ್ತಿ" ಎಂದು ಉಸುರಿದ. ಎಲ್ಲರೂ ಮುಕ್ತಿಯನ್ನು ಇದರಿಂದಲೇ ಸಂಪಾದಿಸಬಹುದೆಂಬ ಮಾರ್ಗದರ್ಶನವನ್ನು ನೀಡಿದ. ಬುದ್ಧನು ಜ್ಞಾನವನ್ನವಲಂಬಿಸಿದಂತೆ, ಬಸವನು ಕೂಡಲ ಸಂಗಮ ದೇವನನ್ನು ಅವಲಂಬಿಸಿದಂತೆ ಈತನೂ ಆತ್ಮ ಬಲವನ್ನೇ ಅವಲಂಬಿಸಿ ಮಹಾತ್ಮನಾದ. ಈತನನ್ನು ಅರ್ಥಮಾಡಿಕೊಳ್ಳಲಾರದ ಜನ ನಿಂದಿಸಿದರೂ ತಮ್ಮ ಸಾಧನೆಯನ್ನು ಬಿಡಲಿಲ್ಲ. ಮಹಾತ್ಮರ ಒಂದೊಂದು ಕಣವೂ ನಮಗೆ ಮಾರ್ಗ ದರ್ಶನವಾಗುವಂತೆ ಈ ಬಾಪೂಜಿಯ ದಿನಚರಿಯೇ ಬೆಳಕನ್ನು ಕೊಡುವಂತಹ ಅದ್ಭುತ ಶಕ್ತಿದಾಯಕ, ಸ್ಫೂರ್ತಿದಾಯಕವಾಗಿತ್ತು. 'ಭಾರತದ ಭಾಗ್ಯವಿಧಾತ"ನೆಂದು ಕರೆಸಿಕೊಂಡಿದ್ದು ಆತನ ಕಾರ್ಯ ಸಾಧನೆಯಿಂದಲೇನೆ. ನುಡಿದಂತೆ ನಡೆ ಎಂಬುದು ಅವರ ಸಿದ್ಧಾಂತ. ಸರ್ವೇಜನಾ ಸುಖಿನೋ ಭವಂತು, ಅರ್ಥಾತ್ ಎಲ್ಲರ ಸುಖಕ್ಕಾಗಿ ದುಡಿದ. Truth is God ! God is truths!! ಎಂಬುದನ್ನು ಘೋಷಿಸಿದ. ಧರ್ಮೋರಕ್ಷತಿ ರಕ್ಷಿತಃ ಸತ್ಯಮೇವ ಜಯತೇ ಇವೇ ಅವರ ಮನಸ್ಸಿನ ಅಚಲ ನಂಬಿಕೆಯಾಗಿತ್ತು. ಒಟ್ಟನಲ್ಲಿ ಸತ್ಯಂ ಶಿವಂ ಸುಂದರಂ ಎಂಬುದು ಅವರ ಆಭರಣವಾಗಿತ್ತು. ಬುದ್ಧ, ಬಸವರಂತೆ ಒಳ್ಳೆಯ ಮಹಾನುಭಾವನಾಗಿ ರಾಮ ರಾಜ್ಯವನ್ನಾಗಿ ಕಲ್ಯಾಣ ರಾಜ್ಯವನ್ನಾಗಿ ಅರ್ಥಾತ್ ಸುಖೀ ರಾಜ್ಯವನ್ನಾಗಿ ಮಾಡಲು ಶ್ರಮಿಸಿದ ಪುರುಷ ಶ್ರೇಷ್ಠ.

ಜ

ಈ ರೀತಿಯಲ್ಲಿ ಬುದ್ಧ, ಬಸವ ಮತ್ತು ಗಾಂಧೀಜಿಯವರು ಹಾಕಿಕೊಂಡ ಸಿದ್ಧಾಂತ ಒಂದೇ ಆದರೂ, ಕಾರ್ಯರೂಪದ ಫಲವೂ ಸಮಾನವಾಗಿ ದೊರೆತಿದ್ದರೂ, ಫಲಗಳು ಬೇರೆ ಬೇರೆ ರೂಪದಲ್ಲಿ ನಮಗೆ ಸಿಗುತ್ತವೆ. ಅರ್ಥಾತ್ ಎಲ್ಲರೂ ಏಳಿಗೆಯೆಂಬ ಮಹತ್ಸಾಧನೆಗಾಗಿ ಶ್ರಮಿಸಿದ ಮಹಾನ್ ವ್ಯಕ್ತಿಗಳು. ಕೆಲವರು ಸಮಾಜದ ಉದ್ಧಾರಕ್ಕಾಗಿ ದುಡಿದರೆ ಮತ್ತೊಬ್ಬರು ಅದರ ಜೊತೆಯಲ್ಲಿಯೇ ಉಪದೇಶ, ವಚನಗಳನ್ನು ಕೊಟ್ಟು ಔಷಧಿಯಂತೆ ಸಮಾಜದ ವ್ಯಾಧಿಯನ್ನು ದೂರ ಮಾಡುವವರಾಗಿದ್ದಾರೆ. ಹೀಗೆ ಈ ದೇವಮಾನವರೂ, ಮಹಾತ್ಮರೂ, ಮಹಾನುಭಾವರೂ ಆದ ಈ ತ್ರಿಮೂರ್ತಿಗಳು ಜಗದ ಸರ್ವತೋಮುಖವಾದ ಏಳಿಗೆಗೆ ತಮ್ಮ ಜೀವಮಾನವನ್ನೇ ಮುಡುಪಾಗಿಟ್ಟಿದ್ದರು. ಮಹಾನುಭಾವ-ಭಗವಾನ್ ಬುದ್ಧ, ಅಹಿಂಸಾಚಕ್ರವರ್ತಿ ಬಾಪೂಜಿ. ದಯಾ ಧರ್ಮಗಳ ಸಾಗರವಾದ ಬಸವೇಶ್ವರರು ನಮ್ಮ ಇತಿಹಾಸ (ಚರಿತ್ರೆ) ಪರ್ವದಲ್ಲಿ ಸುವರ್ಣಾಕ್ಷರಗಳಲ್ಲಿ ಕೆತ್ತಲ್ಪಟ್ಟ ದಿವ್ಯ ರತ್ನಗಳು. ಈ ರತ್ನತ್ರಯರು "ಸೂರ್ಯ-ಚಂದ್ರ-ಧ್ರುವ"ರಂತೆ ಈ ದಿವ್ಯವಾದ ಆಕಾಶದಲ್ಲಿ ಸರ್ವರಿಗೂ ಬೆಳಕನ್ನು ಕೊಡುತ್ತ, ತಂಪನ್ನು ನೀಡುತ್ತಾ, ಕೀರ್ತಿಕಾಯರಾಗಿ ಅಗಾಧವಾದ ಆದರ್ಶಕರಾಗಿ ಅಮರರಾಗಿದ್ದಾರೆ.



# “ವೀರಶೈವ ಧರ್ಮದಲ್ಲಿ ಕಾಯಕದ ಮಹತ್ವ ಹಾಗೂ ಪ್ರಯೋಜನ”.

—ಕೆ. ಜಿ. ಗಂಗಾಧರಯ್ಯ (ಜೂನಿಯರ್ ಎಂ. ಎ. ವಿದ್ಯಾರ್ಥಿ.)

ಮೈಸೂರು ಲಿಂಗಾಯತ ವಿದ್ಯಾಭಿವೃದ್ಧಿ ನಿಧಿ ಸಂಸ್ಥೆಯವರು 'ಲಿಂ. ಹೆಚ್. ಆರ್. ಲಕ್ಷ್ಮೀದೇವಮ್ಮ ನಾಗಣ್ಣ' ನಾಮಾಂಕಿತ ಪ್ರಬಂಧ ಸ್ಪರ್ಧೆಯನ್ನು ಕಾಲೇಜು ವಿದ್ಯಾರ್ಥಿಗಳ ಮಟ್ಟದಲ್ಲಿ ಏರ್ಪಡಿಸಿದ ಸಂದರ್ಭದಲ್ಲಿ ಬಂದ ಈ ಲೇಖನಕ್ಕೆ ಬಹುಮಾನ ಕೊಟ್ಟರು. ವಿದ್ಯಾರ್ಥಿಗಳಿಗೆ ಸಾಹಿತ್ಯ, ಸಂಸ್ಕೃತಿ ಧರ್ಮಗಳ ವಿಷಯದಲ್ಲಿ ಅಭಿರುಚಿಯನ್ನು ಬೆಳೆಯಿಸುವುದೇ ಪ್ರಸಕ್ತ ಪ್ರಬಂಧ ಸ್ಪರ್ಧೆಯ ಉದ್ದೇಶ. ಅಂತೆಯೇ ನಾವೂ ಈ ಲೇಖನವನ್ನಿಲ್ಲಿ ಪ್ರಕಟಿಸಿದ್ದೇವೆ. ಸಂಸ್ಥೆಗೆ ಧನ್ಯವಾದಗಳು.

—ಸಂ

ಮನುಷ್ಯ ಯಾವಾಗಲೂ ಸುಖಕ್ಕಾಗಿ ದುಡಿಯುವ ಜೀವಿ; ಹಾಗೆಯೇ ಲೋಕವೂ ಕೂಡ. ಈ ಸುಖ, ಶಾಂತಿ, ಸಂತೃಪ್ತಿಯು ಲೋಕದಲ್ಲಿ ನೆಲೆಸಬೇಕಾದರೆ ಜನಜೀವನ ನೆಮ್ಮದಿಯಿಂದ ಇರಬೇಕು ಎಂದಂತಾಯಿತು. ಜನಜೀವನದ ನೆಮ್ಮದಿಯೆಂದರೆ ನಿತ್ಯದ ಬದುಕು ಕೊರತೆಯಿಲ್ಲದೆ ಅನುಕೂಲತೆಯಿಂದಿರಬೇಕು. ಈ ಅನುಕೂಲತೆಯೆಂದರೇನು? ಒಂದು ಮನೆ, ಒಂದಷ್ಟು ಹಣ, ಊಟ ಉಪಚಾರಕ್ಕೆ ಸಾಕಷ್ಟು ಸಾಮುಗ್ರಿ ಇವಿಷ್ಟೇ ಅನುಕೂಲತೆಗಳೆ? ಹಾಗಿದ್ದಲ್ಲಿ ಇವುಗಳೆಲ್ಲಾ ನೇರವಾಗಿ ಕುಳಿತ ಜಾಗಕ್ಕೇನೆ ಬರುತ್ತವೆಯೊ? ಸಾಧ್ಯವಿಲ್ಲ. ಮಂತ್ರಿಸಿದರೆ ಮಾವಿನ ಕಾಯಿ ಬೀಳುವುದಿಲ್ಲ. ಮರ ಹತ್ತಬೇಕು, ಇಲ್ಲವೆ ಕಲ್ಲು ಹೊಡೆಯಬೇಕು. ಹಾಗೆಯೇ ನಮ್ಮ ಬದುಕು ಸುಗಮವಾಗಲು ಸಾಕಷ್ಟು ಸಲಕರಣೆಗಳನ್ನು ಹವಣಿಸಿಕೊಳ್ಳಬೇಕು. ಇದಕ್ಕಾಗಿ ನಾವು ಕೆಲಸವನ್ನು ಮಾಡಬೇಕು. ಅಂದಮೇಲೆ ಮಾನವನ ಸುಖ, ಸಂತೃಪ್ತಿಗಳ ಮೂಲವು ಕೆಲಸ ಅಥವಾ ವೃತ್ತಿ ಎಂದಂತಾಯಿತು.

ಈ ವೃತ್ತಿ ಗೌರವ ಎಲ್ಲ ಕಾಲದಲ್ಲೂ ನಡೆದು ಬಂದಿರುವುದು ಸುಳ್ಳಲ್ಲ. ಆದರೆ ಒಂದೇ ಸದುದ್ದೇಶದ ಮಾಧ್ಯಮವಾಗಿ, ಕ್ರಮವಾಗಿ ಉಳಿದು ಬರಲಿಲ್ಲ ಎನ್ನುವುದನ್ನು ಒಪ್ಪಬೇಕು. ನಮ್ಮ ಪ್ರಾಚೀನರು ವೃತ್ತಿಗಳನ್ನು ಅನುಸರಿಸಿ ಕ್ಷತ್ರಿಯ, ವೈಶ್ಯ, ಶೂದ್ರ, ಬ್ರಾಹ್ಮಣ ಹೀಗೆ ವರ್ಣಗಳನ್ನು ವಿಂಗಡಿಸಿದರು. ಇದು ಒಂದು ರೀತಿಯಲ್ಲಿ ಉಪಯುಕ್ತವಾದ ಸದಭಿಪ್ರಾಯದಿಂದಲೇ ರೂಪುಗೊಂಡದ್ದು. ಆದರೆ ಕೆಲವು ಸ್ವಾರ್ಥಮೂಲ ಪ್ರಕೃತಿಯ ಜನಗಳ ದುರಭಿಮಾನದಿಂದ ಕ್ರಮೇಣ ಈ ವರ್ಣಾಶ್ರಮ ಧರ್ಮವು ಮೇಲು-ಕೀಳೆಂದು ವಿಭಾಗಿಸುವ ಸಂಕುಚಿತ ಪ್ರವೃತ್ತಿಯಲ್ಲಿ ಕೊನೆಗೊಂಡಿತು. ಇದರಿಂದ ಬದುಕಿನ ಸುಖವು ಕೇವಲ ಕೆಲವರ ಸ್ವತ್ತಾಯಿತು ಉಳಿದವರು ಆ ಕೆಲವರ ಸುಖಕ್ಕಾಗಿ ತಮ್ಮ ಜೀವಿತವನ್ನು ಮೀಸಲಾಗಿಡಬೇಕಾದ ಪರಿಸ್ಥಿತಿ ಒದಗಿ ಬಂದಿತು.

ಮುಂದೆ ಬಂದ ಜೈನ ಧರ್ಮ ಮತ್ತು ಬೌದ್ಧ ಧರ್ಮಗಳು ಒಂದು ರೀತಿಯಲ್ಲಿ ಪ್ರಾಚೀನ ವೈದಿಕರ ಗೊಡ್ಡು ಸಂಪ್ರದಾಯದ ವಿರುದ್ಧವೋ ಎನ್ನುವಂತೆ ಹುಟ್ಟಿಕೊಂಡರೂ ಕ್ರಮೇಣ ಜೈನಧರ್ಮದ ಆಚರಣೆಯು ಕಠಿಣವಾಗಿ ಅದು ಜನ ಸಾಮಾನ್ಯರ ಮಟ್ಟದಿಂದ ಮೇಲೆ ಎದ್ದು ನಿಂತಿತು. ಅತ್ಯಂತ ಕಷ್ಟಕಾರಕವಾದ ಆಚರಣೆಗಳೇ ಧರ್ಮವೆನ್ನುವಂತೆ ಅದರ ಬೆಳವಣಿಗೆಯಾಗಿತ್ತು. ಅದು ವೈಯಕ್ತಿಕವಾಗಿ ಮನುಷ್ಯನ ಉದ್ಧಾರದ ಕಡೆಗೆ ಗಮನ ಹರಿಸಿದಂತೆ ಕಾಣುವುದಿಲ್ಲ. ಬೌದ್ಧ ಧರ್ಮವು ಈ ರೀತಿ ಜಟಿಲತೆಯ ಕಾಠಿಣ್ಯಕ್ಕೆ ಇಳಿಯದಿದ್ದರೂ ಅದು ಮಾನವನ ಅಂತರಂಗದ ಆದರ್ಶಗಳಿಗೆ ಕನ್ನಡಿ ಹಿಡಿಯುವ ನೀತಿಯನ್ನು ಹೇಳಿತೇ ಹೊರತು ದಿನ ನಿತ್ಯದ ಜೀವನೋಪಾಯದ ಮಾರ್ಗ ಅಥವಾ ವೃತ್ತಿಗೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಂತೆ ಕಂಡುಬರುವುದಿಲ್ಲ. ಆದರೆ ಈ ವೃತ್ತಿಗೆ ಅತೀ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟು ಜನ ಸಾಮಾನ್ಯರ ಮಟ್ಟದಲ್ಲಿ

ಅದರ ಮಹತ್ವವನ್ನು ಪ್ರಕಾಶಪಡಿಸಿದ ಕೀರ್ತಿ ವೀರಶೈವ ಶರಣರಿಗೇ ಸಲ್ಲಬೇಕು.

'ಕನ್ನಡ ಸಮಾಜದ ಪ್ರಧಾನ ಭಾಗ ವೀರಶೈವ ಸಮಾಜ, ವೀರಶೈವ ಸಮಾಜದ ಬಹುಭಾಗ ಕನ್ನಡ ಸಮಾಜ'*[1]. ಹನ್ನೆರಡನೇ ಶತಮಾನದಲ್ಲಿ ವೀರಶೈವ ಶರಣರು ಕರ್ಣಾಟಕವನ್ನು ತಮ್ಮ ಕಾರ್ಯರಂಗವನ್ನಾಗಿ ಮಾಡಿಕೊಂಡರು ಮತ್ತು ಅಜ್ಞಾನ ಅಂಧಕಾರಗಳಿಂದ ತುಂಬಿದ್ದ ನಮ್ಮ ಕನ್ನಡ ಸಮಾಜದಲ್ಲಿ ಜ್ಞಾನ ದೀವಿಗೆಯನ್ನು ಬೆಳಗಿದರು. ಅವರು ಆದರ್ಶಮಯವಾದ ಬಾಳನ್ನು ಅಥವಾ ಬದುಕನ್ನು ಬಾಳಿದರು. ವ್ಯಕ್ತಿ ವ್ಯಕ್ತಿಯ ಆತ್ಮೋದ್ಧಾರದ ಕಡೆಗೆ ಅವರು ಗಮನ ಕೊಟ್ಟರು. ಬಹು ವಿಶಾಲವಾದ ಕಾಲದೇಶಗಳ ಮರ್ಯಾದೆಯನ್ನು ಮೀರಿದ ಉದಾತ್ತ ತತ್ವಗಳನ್ನು ಬೋಧಿಸಿದರು. ವೀರಶೈವ ಶರಣರು ಬಹು ವಿಶಾಲವಾದ, ಕಾಲ ದೇಶಗಳ ಮರ್ಯಾದೆಯನ್ನು ಮೀರಿದ, ಉದಾತ್ತ ತತ್ವಗಳನ್ನು ಬೋಧಿಸಿದ್ದಷ್ಟೇ ಅಲ್ಲದೆ ಆಚರಣೆಗೂ ತಂದರು. ಅಂದಿನ ರಾಜಕೀಯ ಗಲಭೆಯಿಂದ ತೊಳಲಾಡುತ್ತಿದ್ದ ಸಮಾಜದಲ್ಲಿ ಶಾಂತಿ ಸ್ಥಾಪನೆಯನ್ನು ಮಾಡಿದರು. ಇವರಿಗೆ ಭಕ್ತಿ ಭಂಡಾರಿ ಬಸವಣ್ಣನವರು ನಾಯಕರಾದರು.

"ಭೂತದಯೆ, ಸಮಾನತೆಗಳ ತಳಹದಿಯ ಮೇಲೆ ನವ ಸಮಾಜವನ್ನು ಕಟ್ಟಬೇಕೆಂಬುದೇ ಬಸವಣ್ಣನವರ ಜೀವನ ದರ್ಶನವಾಗಿತ್ತು"*[2]. ಹಾಗೆ ಅವರು ಕಂಡ ಜೀವನ ದರ್ಶನದಲ್ಲಿ ವೃತ್ತಿಗೆ (ಕಾಯಕ) ಹೆಚ್ಚಿನ ಮಹತ್ವವನ್ನು ಕೊಟ್ಟಿದ್ದಾರೆ. "ಕಾಯಕ" ಎನ್ನುವ ಸುಂದರವಾದ ಸಂಸ್ಕೃತ ಮಾತಿನಲ್ಲಿ ಶಿವಶರಣರು ಇದನ್ನು ನಿರ್ದೇಶಿಸಿದ್ದಾರೆ. ಅದರ ಮಹತ್ವವನ್ನು ಅನೇಕ ರೀತಿಯಲ್ಲಿ ವಿಷದಪಡಿಸಿ, ತಾವೇ ಅದನ್ನು ತಮ್ಮ ದಿನ ನಿತ್ಯದ ಬದುಕಿನಲ್ಲಿ ಆಚರಿಸಿ ತೋರಿಸಿದರು.

ಭಾರತೀಯ ಸಂಸ್ಕೃತಿಯ ತಿರುಳೇ ವೀರಶೈವ ಧರ್ಮ ಎಂದು ಹೇಳಬಹುದು. ಆದರೂ ವೀರಶೈವ ಧರ್ಮವು ಅನೇಕ ವಿಶಿಷ್ಟತೆಗಳಿಂದ ಸ್ವತಂತ್ರವಾಗಿದೆ ಹಾಗೂ ಎಲ್ಲ ಮತಗಳಿಂದಲೂ ಮಹತ್ವಪೂರ್ಣದ್ದಾಗಿದೆ. ಮಾನವ ಕಲ್ಯಾಣವನ್ನು ದೃಷ್ಟಿಯಲ್ಲಿರಿಸಿಕೊಂಡ ಉದಾತ್ತವಾದ ತತ್ವಗಳೇ ಇದಕ್ಕೆ ಪ್ರಮುಖ ಕಾರಣ. "ಶೈವ ಧರ್ಮವು ಅತೀ ಪ್ರಾಚೀನವಾದದ್ದು. ಸಪ್ತ ಶೈವಗಳಲ್ಲಿ ವೀರಶೈವವು ಅತ್ಯಂತ ಶ್ರೇಷ್ಠವೆಂದು ಶಿವಾಗಮಗಳು ಹೇಳುತ್ತವೆ.*[3] ಸಮಾನತೆ, ಅಹಿಂಸೆ ಇತ್ಯಾದಿಗಳಿಗೆ ಪ್ರಾಶಸ್ತ್ಯಕೊಟ್ಟಂತೆ ಕ್ರಿಯೆ ಜ್ಞಾನ ಎರಡಕ್ಕೂ ವೀರಶೈವ ಧರ್ಮವು ಪ್ರಮುಖ ಸ್ಥಾನ ಕೊಡುತ್ತದೆ.

ಜ್ಞಾನಯೋಗ, ಭಕ್ತಿಯೋಗ, ಕರ್ಮಯೋಗಗಳಲ್ಲಿ ಕರ್ಮಯೋಗಕ್ಕೆ ಹೆಚ್ಚಿನ ಪ್ರಾಶಸ್ತ್ಯವಿದೆ. ತನ್ನ ಮತ್ತು ಸಮಾಜದ ಸುಧಾರಣೆ ಹಾಗೂ ವಿಕಾಸಕ್ಕಾಗಿ ಸ್ವಶಕ್ತಿ ಹಾಗೂ ಪರಿಸ್ಥಿತಿಗಳಿಗೆ ಅನುಗುಣವಾಗಿ ಪ್ರತಿಯೊಬ್ಬನೂ ಮಾಡತಕ್ಕ ಕರ್ತವ್ಯವೇ ಕರ್ಮವು. "ಜ್ಞಾನ ಬುದ್ಧಿಯನ್ನೂ, ಭಕ್ತಿಯು ಭಾವನೆಯನ್ನೂ ಮುಖ್ಯವಾಗಿ ಅವಲಂಬಿಸಿಕೊಂಡಿರುವಂತೆ ಕರ್ಮವು ಮನುಷ್ಯನ ಸಂಕಲ್ಪ ಶಕ್ತಿಯನ್ನು ಅಥವಾ ಕ್ರಿಯಾಶಕ್ತಿಯನ್ನು ಅವಲಂಬಿಸಿಕೊಂಡಿದೆ *[5] ಹೀಗೆ ಕ್ರಿಯಾಶಕ್ತಿಯನ್ನು ಅವಲಂಬಿಸಿದ ಮಾನವನ ಕ್ರಿಯೆಯು ಅವನ ಉದ್ಧಾರದ ಹಾದಿಯಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ.

ಶಿವಶರಣರ ಬದುಕು ಅವರು ಕಟ್ಟಿದ ನವ ಸಮಾಜದ ಸುವ್ಯವಸ್ಥಿತ ಜೀವನವನ್ನೇ ನಿರೂಪಿಸುತ್ತದೆ ಎಂದು ಹೇಳಬಹುದು. ಅವರು ಕಾಯಕಕ್ಕೆ ಎಷ್ಟೊಂದು ಮಹತ್ವ ಕೊಟ್ಟಿದ್ದರೆಂದರೆ ಅವರ ಹೆಸರಿನೊಂದಿಗೆ ಅವರು ಮಾಡುತ್ತಿದ್ದ ವೃತ್ತಿಯೂ ಅಂಟಿಕೊಂಡಿರುವುದು. ಆಯ್ದಕ್ಕಿ ಮಾರಯ್ಯ, ಮೋಳಿಗೆ ಮಾರಯ್ಯ, ಮಾದಾರ ಚೆನ್ನಯ್ಯ ಇತ್ಯಾದಿ ಅನೇಕ ಉದಾಹರಣೆಗಳನ್ನು ಕೊಡಬಹುದು. ಆಯ್ದಕ್ಕಿ ಮಾರಯ್ಯ ಹೇಳುತ್ತಾನೆ:—

1. ಯುಗ ಪ್ರವರ್ತಕ ಬಸವಣ್ಣ : ಚಿಂತಾಮಣಿ (ಶಿ. ಶಿ. ಬಸವನಾಳದ ಮುನ್ನುಡಿ.)
2. ಕನ್ನಡ ಸಾಹಿತ್ಯ ಚರಿತ್ರೆ. ರಂ. ಶ್ರೀ ಮುಗಳಿ. ಪುಟ 82
3. ವೀರಶೈವ ಸಾಹಿತ್ಯ ಮತ್ತು ಇತಿಹಾಸ. ಬಿ. ಶಿವಮೂರ್ತಿ ಶಾಸ್ತ್ರಿ. ಪುಟ 149.
5. ವಚನ ಶಾಸ್ತ್ರ ರಹಸ್ಯ. ರಂ. ರಾ. ದಿವಾಕರ. ಪುಟ 64

"ಕಾಯಕದಲ್ಲಿ ನಿರತನಾದೊಡೆ ಗುರು ದರುಶನ ವಾದರೂ ಮರೆಯಬೇಕು. ಲಿಂಗಪೂಜೆಯಾದರೂ ಮರೆಯಬೇಕು."

ಅಂದರೆ ಕಾಯಕವು ಶ್ರದ್ಧೆ, ನಿಷ್ಠೆಗಳಿಂದ ಆಚರಿಸಲ್ಪಡಬೇಕು ಎಂದು ಹೇಳಿದಂತಾಯಿತು. ಗುರುವು ಪೂಜ್ಯನು ದಿಟ, ಲಿಂಗಪೂಜೆ ಮಾಡಬೇಕು ಅವಶ್ಯ—ಆದರೆ ಕಾಯಕವು ಅದಕ್ಕಿಂತ ಅಂದರೆ ಗುರು ದರ್ಶನಕ್ಕಿಂತಲೂ, ಲಿಂಗ ಪೂಜೆಗಿಂತಲೂ ಮಹತ್ವದ್ದು. ಕಾಯಕವೇ ಪೂಜೆ ಕಾಯಕವೇ ಗುರು. ಕಾಯಕವೇ ಕೈಲಾಸ. ಕಾಯಕವೇ ಸರ್ವಸ್ವ.

"ಕಾಯಕ ತಪ್ಪಿದರೆ ಸೈರಿಸಬಾರದು, ವ್ರತ ತಪ್ಪಿದರೆಂತು ಸೈರಿಸಬಹುದು?"

ಎಂಬುದಾಗಿ ಮಹಾಶಿವಶರಣೆ ಕಾಳವ್ವ ಹೇಳುತ್ತಾಳೆ. ಇಲ್ಲಿ ಕಾಯಕಕ್ಕೆ ಒಂದು ವ್ರತದ ಬೆಲೆ ಕೊಡಲ್ಪಟ್ಟಿದೆ. ಒಂದು ವ್ರತವೆಂದರೆ ನಮಗೆ ಸಾಮಾನ್ಯವಾಗಿ ಪೂಜ್ಯ ಭಾವನೆ ಇರುತ್ತದೆ. ಆ ವ್ರತವನ್ನು ಬಹಳ ಎಚ್ಚರಿಕೆಯಿಂದ ಪಾಲಿಸುತ್ತೇವೆ. ಅದಕ್ಕೆ ಯತ್ ಕಿಂಚಿತ್ ಕುಂದಾದರೂ ಅಪಚಾರವಾಗಿ ಎಲ್ಲಿ ಕೇಡಾಗುವುದೋ ಎಂದು ಅಂಜಿ ಆದಷ್ಟು ಎಚ್ಚರಿಕೆ ವಹಿಸುತ್ತೇವೆ. ಈ ವಿಧವಾದ ಪರಮ ಪವಿತ್ರವಾದ ವ್ರತವೇ ಕಾಯಕ. ಹೀಗೆ ಶಿವಶರಣರು ಕಾಯಕವನ್ನು ಶಿವಪೂಜೆಯ ಅಥವಾ ಲಿಂಗಪೂಜೆಯ ಮಟ್ಟಕ್ಕೆ ಕೊಂಡೊಯ್ದರು.

ಕಾಯಕ ಅಂದರೆ ಜೀವನೋಪಾಯದ ವೃತ್ತಿ ಎಂದರ್ಥ. ಆದರೆ ಆ ವೃತ್ತಿಯು ಅನ್ಯರಿಗೆ ಅನ್ಯಾಯವನ್ನು ಯಾವ ರೀತಿಯಿಂದಲೂ ಮಾಡುವಂತಿರಬಾರದು. ಅಥವಾ ಅನ್ಯರಿಗೆ ಕೇಡನ್ನು ಬಗೆದು ತನಗೆ ಮಾತ್ರ ಒಳ್ಳೆಯದಾಗುವಂತಿರಬಾರದು. ಹೇಗೊ ಹಣ ಸಂಪಾದಿಸಿ ಸುಖಪಡುವ ಪ್ರವೃತ್ತಿ ಇರಬಾರದು. ಸಾಲವನ್ನಾದರೂ ಮಾಡಿ ತುಪ್ಪವನ್ನು ಸೇವಿಸು ಎಂಬ ಚಾರ್ವಾಕರ ಪರಂಪರೆಯ ಕರ್ಮವಾಗಿರಬಾರದು.

ಕಾಯಕವು ಹೇಗಿರಬೇಕೆಂಬುದನ್ನು ಮಹಾಶರಣ ನುಲಿಚಂದಯ್ಯ ತನ್ನ ವಚನದಲ್ಲಿ ಈ ರೀತಿ ಹೇಳುತ್ತಾನೆ.

"ಸತ್ಯಶುದ್ಧ ಕಾಯಕದಲ್ಲಿ ಚಿತ್ತ ವಿಚ್ಛಂದವಾಗದಿರಬೇಕು.
ನೇಮದ ಕೂಲಿ ಅಂದಿನ ನಿತ್ಯ ಕಾಯಕದಲ್ಲಿ ಸಂದಿರಬೇಕು.
ನೇಮದ ಕೂಲಿಯ ಬಿಟ್ಟು ಹೇಮದಾಸೆಗೆ
ಕಾಮಿಸಿ ದ್ರವ್ಯವ ಹಿಡಿದರೆ, ತಾ ಮಾಡುವ
ಸೇವೆ ನಷ್ಟವಯ್ಯ"

ಅರ್ಥಾತ್ ನಮ್ಮ ಕೆಲಸ ಮತ್ತು ಅದರ ಗಳಿಕೆ ಅಥವಾ ಪ್ರತಿಫಲವು ಲೆಕ್ಕಾಚಾರವಾದುದಾಗಿರಬೇಕು. ಕೆಲಸಕ್ಕೆ ತಕ್ಕ ಕೂಲಿಯು ತೊರೆತಾಗಲೇ ಅದರ ಸಾರ್ಥಕ್ಯ, ಹೆಚ್ಚು ಗಳಿಸುವ ಕಾಮ ಬುದ್ಧಿ ಇರಬಾರದು. ನಿಷ್ಕಾಮ ಕರ್ಮದಿಂದ ಮಾಡುವ ವೃತ್ತಿಯೇ ಕಾಯಕ. ಅದೇ ಶಿವನ ಪೂಜೆಯಾಗಬಲ್ಲದು, ಸೇವೆಯಾಗಬಲ್ಲದು. ಅದಿಲ್ಲದೇ ಕೇವಲ ಸ್ವಾರ್ಥತೆ ಹಾಗೂ ಕಾಮ್ಯಬುದ್ಧಿಯಿಂದ ಮಾಡುವ ಕರ್ಮವು ಕಾಯಕವೆನಿಸಲಾರದು. ಅಂದರೆ ಈಶ್ವರಾರ್ಪಣ ಬುದ್ಧಿಯಿಂದ ಮಾಡಿದ ನಿಷ್ಕಾಮ ಕರ್ಮವೇ ಕಾಯಕವೆಂದು ಹೇಳಿದಂತಾಯಿತು.

ಆದಮೇಲೆ ಕಾಯಕವು ಎಲ್ಲಕ್ಕಿಂತಲೂ ಮಹತ್ವವಾದದ್ದು. ಅದನ್ನು ಎಂದೂ ಯಾವ ಕಾರಣದಿಂದಲೂ ತಪ್ಪಿಸಬಾರದು. ಗುರುಗಳು ಕೂಡ ಕಾಯಕದಿಂದಲೇ ಮುಕ್ತರಾಗುವರು. ತ್ರಿಕರಣ ಶುದ್ಧಿಯಿಂದ ಮಾಡಿದ ಕಾಯಕವು ಕೈವಲ್ಯ ಪ್ರಾಪ್ತಿಗೆ ಶ್ರೇಷ್ಠ ಸೋಪಾನವೆಂದು ಶ್ರೀ ಸರ್ಪಭೂಷಣ ಶಿವಯೋಗಿಗಳು ಅಪ್ಪಣೆ ಕೊಡಿಸಿದ್ದಾರೆ.

ಶಿವಶರಣರು ಈ ಕಾಯಕಕ್ಕೆ ನಿಸ್ವಾರ್ಥವಾದ ರೀತಿಯ ಆಚರಣೆಯಿಂದ ಲಿಂಗ ಪೂಜೆಯ ಮಟ್ಟಕ್ಕೆ ಎತ್ತಿ ಹಿಡಿದಂತೆ ಅದು ಸರ್ವಾರ್ಪಣ ಮನೋಭಾವದಿಂದ ಕೂಡಿರಬೇಕೆಂದು ಒತ್ತಿ ಹೇಳಿದರು. ಭಕ್ತನ ಗಳಿಕೆಯು ಪರಮಾತ್ಮನಿಗಾಗಿ ಅರ್ಪಿತವಾಗಿರುತ್ತದೆ. ನಿಜವಾದ ಭಕ್ತನ ಭಾವನೆಯು ಹೇಗಿರುವುದೆಂದರೆ:

'ಯದ್ಯತ್ ಕರ್ಮ ಕರೋಮಿ
ತತ್ತದಖಿಲಂ ಶಂಭೋ ತವಾರಾಧನಮ್'

ಅಂದರೆ ಮನಸಾ, ಕಾಯೇನ, ವಾಚಾ ಈ ತ್ರಿಕರಶುದ್ಧಿಯಿಂದ ಮಾಡಿದ ಸಕಲ ಕರ್ಮಗಳೂ ಪರಶಿವನಿಗೆ ಅರ್ಪಿತವೆಂಬ ಭಾವನೆ ಬಲವಾದವನೇ ಭಕ್ತನೆಂದು ಹೇಳಿದಂತಾಯಿತು.

'ಮಾನವನಿಗಿರುವುದು ಎರಡೇ ಎರಡು ಶಕ್ತಿ. ಒಂದು ಪ್ರಜ್ಞಾಶಕ್ತಿ, ಇನ್ನೊಂದು ಕ್ರಿಯಾಶಕ್ತಿ. ಪ್ರಜ್ಞಾಶಕ್ತಿಯು ವಿದ್ಯೆಯಿಂದ ಬೆಳೆದು ಬಂದರೆ ಕ್ರಿಯಾಶಕ್ತಿಯು ಕಾಯಕದಿಂದ ಬೆಳೆದು ಬರುತ್ತದೆ.*7

ಒಂದು ಕಾಲದಲ್ಲಿ ಜಡಕರ್ಮಗಳೂ, ಮೂಢ ಕರ್ಮಗಳೂ ಕೂಡ ಕಾಯಕ ಎಂಬ ಹೆಸರನ್ನು ಪಡೆದುಕೊಂಡಿದ್ದವು. ಹಿಂದೆ ಹೇಳಿದಂತೆ ವರ್ಣಾಶ್ರಮ ಧರ್ಮದ ವಿಭಾಗ ಕ್ರಮದಿಂದ ಉಂಟಾದ ಕುರುಡು ಪರಿಪಾಠವೇ ಇದೆಂದು ಹೇಳಬಹುದು. ಉಚ್ಚವರ್ಗವೆನ್ನುವ ಒಂದೇ ಒಂದು ಕಾರಣದಿಂದ ತಮ್ಮ ಸ್ಥಿತಿ ಗತಿಗಳನ್ನು ಎಲ್ಲರಿಗಿಂತಲೂ ಮೇಲ್ಮಟ್ಟದಲ್ಲಿ ಇರಿಸಿಕೊಂಡು ತಾವೇ ಪೂಜ್ಯರು, ತಾವೇ ದೇವತ್ವವನ್ನು ಕಾಣಬಲ್ಲವರು ಎನ್ನುವವರು ತಮ್ಮ ಸ್ವಪ್ರತಿಷ್ಠೆಯನ್ನು ಬೆಳೆಸಿಕೊಂಡದ್ದಲ್ಲದೇ ಇತರರನ್ನೂ ಸಹ ಈ ಅಂದನಿಷ್ಠೆಯ ವೃತ್ತಕ್ಕೆ ಒಳಪಡಿಸಿಕೊಂಡರು

ಆದರೆ, "ಶಿವಶರಣರು ಜಡ ಕರ್ಮ ಮೂಢಕರ್ಮಗಳನ್ನೆಲ್ಲಾ ತೆಗೆದು ಹಾಕಿ ಸತ್ಯ ಶುದ್ಧ ಕಾರ್ಯಗಳಿಗೆ ಕಾಯಕವೆನ್ನಲು ಮೊದಲುಮಾಡಿದರು. ಕಾಯಕವು ಸತ್ಯ ಶುದ್ಧವಾದಂತೆ ಸ್ವಾರ್ಥ ರಹಿತವೂ ಆಗಿರಬೇಕೆಂದು ಪ್ರತಿಪಾದಿಸಿದರು. ಇದರಿಂದ ಕಾಯಕ ಕಲೆಯು ಬಂದಿತು. ಕಾಯಕವು ಒಂದು ಕಲೆಯೇ ಆಯಿತು. ಶಿವಶರಣರ ಪ್ರಯೋಗ ಶಾಲೆಯಲ್ಲಿ*8 ಕಾಯಕಕ್ಕೆ ನಿಖರವಾದ ಪರಿಶುದ್ಧವಾದ ಬೆಲೆಯನ್ನ ಕಟ್ಟುವುದರಲ್ಲಿ ಶಿವಶರಣರು ತಮ್ಮ ಜೀವನವನ್ನೇ ಮೀಸಲಾಗಿರಿಸಿದರು.

ಮಾನವ ಕಲ್ಯಾಣದ ಹಾದಿಯಲ್ಲಿ ಕಾಯಕದ ಮಹತ್ವವನ್ನು ಶಿವಶರಣರು ನಿರ್ಧರಿಸಿದರು. ಈ ಕಾಯಕವು ಕೆಲವೊಂದು ವರ್ಗಕ್ಕೇನೆ ಸೀಮಿತ, ಉಳಿದವರು ಅವರ ಸಂಪಾದನೆಯಲ್ಲಿ ಬದುಕುವ ಮಹತ್ವದ ಪಟ್ಟ ಕಟ್ಟಿಸಿಕೊಂಡ ಜನರು ಎಂಬ ಅಭಿಪ್ರಾಯಕ್ಕೆ ವೀರಶೈವ ಧರ್ಮದ ಕಾಯಕ ತತ್ವವು ಪ್ರಬಲ ವಿರೋಧವನ್ನು ಉಂಟುಮಾಡುವುದೆಂಬ ವಿಷಯವನ್ನು ಗಮನಿಸಬೇಕು. ಸಕಲ ಮಾನವರಿಗೂ ಹೆಂಗಸರಾಗಲಿ, ಗಂಡಸರಾಗಲಿ, ಚಿಕ್ಕವರಾಗಲಿ, ದೊಡ್ಡವರಾಗಲಿ, ಸರ್ವರಿಗೂ ಸರ್ವತ್ರವೂ ಅನ್ವಯಿಸುವ ಸಮಾನ' ತತ್ವವಾಗಿದೆ ಈ ವೀರಶೈವ ಧರ್ಮದ ಕಾಯಕ ತತ್ವ.

ಕರ್ತೃತ್ವ ಅಥವಾ ಕ್ರಿಯಾಶೀಲತೆಯು ಚೈತನ್ಯದ ಲಕ್ಷಣ. ಆ ಚೈತನ್ಯವು ಕೇವಲ ದೈಹಿಕವಷ್ಟೇ ಅಲ್ಲ, ಮಾನಸಿಕ ಅಥವಾ ಆತ್ಮಿಕವೂ ಹೌದು. ಏಕೆಂದರೆ ಕಳ್ಳನೂ ಕೂಡ ದೈಹಿಕವಾಗಿ ಚೈತನ್ಯವುಳ್ಳ ವ್ಯಕ್ತಿಯಾಗಿರುತ್ತಾನೆ. ಮಾನಸಿಕ ಅಥವಾ ಆತ್ಮಿಕ ಚೈತನ್ಯವೆಂದರೆ ವ್ಯಕ್ತಿಗತವಾಗಿ ಅಥವಾ ಲೌಕಿಕವಾಗಿ ಹೇಗೋ ಬದುಕಬೇಕೆನ್ನುವ ಉದಾಸೀನ ಪರಿಸರದಿಂದ ಅದಕ್ಕಿಂತ ಬೇರೆಯೇ ಆದ ಲೋಕ ಕಲ್ಯಾಣವನ್ನು ಬಯಸುವ, ತನ್ನ ಕಾಯಕದಿಂದ ಅಥವಾ ತನ್ನ ಕ್ರಿಯಾಶೀಲತೆಯಿಂದ ಪರಮಾತ್ಮನನ್ನು ಕಾಣುವ ಆಧ್ಯಾತ್ಮಿಕ ಪರಿಸರಕ್ಕೆ ದಾಟುವುದು ಎಂದು ಹೇಳಬಹುದು. ಅದನ್ನೇ ಶೀಲ ಎಂದು ಬೇಕಾದರೆ ಕರೆಯಬಹುದು. ನಮ್ಮ ಕಾಯಕಕ್ಕೆ ಒಂದು ಶೀಲಬೇಕು; ಅದೇ ಸದ್ವೃತ್ತಿ. ಅಂದರೆ ತನ್ನ ಕ್ರಿಯೆಯಿಂದ ಇನ್ನೊಬ್ಬರಿಗೆ ಯಾವ ವಿಧದಿಂದಲೂ ಕೆಡಕನ್ನುಂಟುಮಾಡುವಂತೆ ಇರಬಾರದು. ಅದು ತನ್ನ ಜೀವನೋಪಾಯಕ್ಕೆ ಗಳಿಕೆಯನ್ನು ಪಡೆದುಕೊಳ್ಳುವ ಒಂದು ಸ್ವಯಂ ಕ್ರಿಯೆ ಆಗಿರಬೇಕು. ಆಗ ಅದು ತನ್ನಷ್ಟಕ್ಕೆ ಪರಿಶುದ್ಧವಾದದ್ದಾಗಿರುತ್ತದೆ. ಈ ಪರಿಶುದ್ಧತೆಯೇ ಪೂಜೆ ಎಂಬ ಹೆಸರಿನಿಂದ ಕರೆಯಲ್ಪಡುವುದು.

ಕಾಯಕವು ಭೋಗ ಮತ್ತು ತ್ಯಾಗಗಳಿಗೆ ದಾರಿಯನ್ನು ಮಾಡಿಕೊಡುತ್ತದೆ. ದುಡಿದು ತಿನ್ನುವವನು ಯಾವ ಅಂಜಿಕೆಯೂ ಇಲ್ಲದೆ, ಬೇರೆ ಯಾರೊಬ್ಬರ

7. "ಕಾಯಕ ಕಲೆ" ⓢ ಜ. ಚ. ನಿ. ಮುನ್ನುಡಿ. ಪುಟ 2
8. "ಕಾಯಕ ಕಲೆ." ⓢ ಜ. ಚ. ನಿ. ಪುಟ 2.

ಆಕ್ಷೇಪಣೆಯೂ ಇಲ್ಲದೆ ತನ್ನ ಪಾಲಿನ ಸುಖವನ್ನು ಅನುಭವಿಸಲು ಕಾರಣನಾಗುತ್ತಾನೆ, ಅದು ಧರ್ಮ ಬಾಹಿರವಲ್ಲದಾಗ ಕಾಯಕವು ನ್ಯಾಯ ಬಾಹಿರವಲ್ಲದಾಗ ಮಾತ್ರ. ಅಂದರೆ ಸ್ವಾವಲಂಬನೆಯೇ ಸುಖದಹಾದಿ ಎಂಬ ವಿಷಯವನ್ನು ಇಲ್ಲಿ ಹೇಳಿದಂತಾಯಿತು.

ಕಾಯಕದ ಜೊತೆಗೆ ತನ್ನ ಗಳಿಕೆಯನ್ನು ಅಸಹಾಯಕರಿಗೆ ನೆರವಿಗಾಗಿ ಉಪಯೋಗಿಸಬಹುದು. ದೀನ ದಲಿತರಿಗೆ ಬದುಕಿನ ಅವಶ್ಯಕತೆಯನ್ನು ಪೂರೈಸುವಂತಾಗಬಹುದು. ಇಲ್ಲಿ ತ್ಯಾಗ ಬರುತ್ತದೆ. ಅನ್ಯಾಯ ರೀತಿಯಲ್ಲಿ ಗಳಿಸಿದ ಹಣವು ಯಾವ ಸತ್ಕಾರ್ಯಗಳಿಗೂ ಯೋಗ್ಯವಾಗುವುದಿಲ್ಲ. ಇದನ್ನೇ —

"ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೇ
ಸತ್ಪಾತ್ರಕ್ಕೆ ಸಲ್ಲದಯ್ಯಾ.
ನಾಯಿಯ ಹಾಲು ನಾಯಿಕುನ್ನಿಗಳಿಗಲ್ಲದೆ
ಪಂಚಾಮೃತಕ್ಕೆ ಸಲ್ಲದಯ್ಯಾ"

ಎಂಬುದಾಗಿ ಜಗಜ್ಜ್ಯೋತಿ ಶ್ರೀ ಬಸವಣ್ಣನವರು ಹೇಳಿದ್ದಾರೆ. ಮತ್ತು,

"ನದೇವಾಯ ನಧರ್ಮಾಯ
ನ ಬಂಧುಭ್ಯೋ ನಚಾರ್ಥಿನೇ।
ದುರ್ಜನ ಸ್ಯಾರ್ಜಿತಂ ವಿತ್ತಂ
ಭುಂಜತೇ ರಾಜ ತಸ್ಕರೈಃ॥

ಈ ಸಂಸ್ಕೃತ ಶ್ಲೋಕದಲ್ಲಿ ಮೇಲೆ ಹೇಳಿದ ಅರ್ಥವೇ ಅಡಕವಾಗಿದೆ.

ಕಾಯಕದಲ್ಲಿ ಸ್ವಾವಲಂಬನ ಜೀವನದ ತತ್ತ್ವವು ಅಡಕವಾಗಿರುವುದು. ತಾನು ಇನ್ನೊಬ್ಬರಿಗೆ ಹೊರೆಯಾಗಿ, ಭಾರವಾಗಿ ಬಾಳಬಾರದು. ತನ್ನ ಗಳಿಕೆಯೇ ಅನ್ಯರಿಗೆ ಆಸರೆಯಾಗುವಂತಿರಬೇಕು. ಇನ್ನೊಬ್ಬರ ಬಳಿ ಕೈಯೊಡ್ಡಿ ಬೇಡುವುದಕ್ಕಿಂತಲೂ ಕೀಳಾದ ಕೆಲಸ ಬೇರೊಂದಿಲ್ಲ. ಇದನ್ನೇ ಪೂಜ್ಯ ಶ್ರೀಮನ್ನಿಜಗಣ ಶಿವಯೋಗಿಗಳು ಹೇಳುತ್ತಾರೆ:

"ಧರೆಗೆ ಯಾಚನೆಗಿಂತ
ಲಘುತರ ಮಿನ್ನುಂಟೆ?"

ಆದ್ದರಿಂದ ಪರಧನ ಮತ್ತು ಪರಾನ್ನಗಳಲ್ಲಿ ಆಸಕ್ತರಾಗಬಾರದು ಎನ್ನುವುದೇ ಈ ಕಾಯಕದ ದೃಢ ವ್ರತ. ಕೈ ಕೆಸರಾದರೆ ಬಾಯ್ ಮೊಸರಾಗುವುದು. ಅಂದರೆ ಕೈಗಳಿಂದ ದುಡಿದು ಬಾಯಲ್ಲಿ ಮೊಸರನ್ನು ಅರ್ಥಾತ್ ಆಹಾರವನ್ನು ಸೇವಿಸುವ ರೀತಿಯೇ ಈ ಕಾಯಕದ ಲೀಲೆ. ಅಲ್ಲದೆ ನಾವು ಮಾಡುವ ಕಾರ್ಯದಲ್ಲಿ ಅಹಂ ಮಮತಾ ಬುದ್ಧಿ ಅಂದರೆ ನಾನೇ ಮಾಡಿದೆ, ನನ್ನಿಂದಲೇ ಆಯಿತು, ಎಂಬ ಭಾವನೆ ಎಂದೂ ಇರಬಾರದು. ಅದು ಇದ್ದಲ್ಲಿ ಆ ಕಾಯಕವು ಪರಿಶುದ್ಧ ಕಾಯಕವೆನ್ನಿಸಿಕೊಳ್ಳುವುದಿಲ್ಲ. ಏಕೆಂದರೆ,—

"ಮಾಡಿದೆನೆಂಬುದು ಮನದಲ್ಲಿ ಹೊಳೆದರೆ
ಏಡಿಸಿ ಕಾಡಿತ್ತು ಶಿವನ ಡಂಗುರ,
ಮಾಡಿದೆನೆನ್ನದಿರಾ ಲಿಂಗಕ್ಕೆ।
ಮಾಡಿದೆನೆನ್ನದಿರಾ ಜಂಗಮಕ್ಕೆ।

ಈ ಸರ್ವಾರ್ಪಣ ಭಾವನೆ ಮುಖ್ಯ. ತನ್ನ ಪ್ರತಿಯೊಂದು ಕಾರ್ಯದಲ್ಲಿ ಶಿವಾರ್ಪಿತ ಅಥವಾ ಈಶ್ವರಾರ್ಪಿತವೆಂದಾಗ ಮಾತ್ರವೇ ಆ ಕಾರ್ಯ ಸಾರ್ಥಕವಾಗುತ್ತದೆ. ಈ ಮನೋಭಾವನೆ ನಮ್ಮಲ್ಲಿ ಮೂಡಿದಾಗ ಮಾತ್ರ ಆ ಕಾಯಕವು ಕೈಲಾಸವಾಗುತ್ತದೆ. ಏಕೆಂದರೆ ಕಾಯಕವೇ ಕೈಲಾಸ. ನಮ್ಮ ಕಲ್ಪನಾಮಯ ಕೈಲಾಸಕ್ಕಿಂತಲೂ ನಮ್ಮ ದಿನ ನಿತ್ಯದ ಶುದ್ಧವಾದ ನಡೆ, ಶುದ್ಧವಾದ ನುಡಿ, ಶುದ್ಧವಾದ ಕಾಯಕದಲ್ಲಿ ಕೈಲಾಸವು ಅಡಗಿದೆ ಎನ್ನುವ ಬಹಳ ಬೆಲೆಯುಳ್ಳ ಸತ್ಯವನ್ನು ಜನ ಸಾಮಾನ್ಯರಿಗೂ ತೋರಿಸಿ ಕೊಟ್ಟರು ಶರಣರು. ಕಾಯಕವೇ ಕೈಲಾಸ Work is worship ಎಂಬ ಸೂತ್ರವು ಇಂದಿನ ನಮ್ಮ ಬದುಕಿಗೆ ಅತ್ಯಂತ ಆವಶ್ಯಕವಾಗಿದೆ.

ಕಾಯಕದಲ್ಲಿ ಕೃಷಿ ಅಥವಾ ಬೇಸಾಯಕ್ಕೆ ಪ್ರಧಾನ ಸ್ಥಾನವನ್ನು ಕೊಟ್ಟಿದ್ದಾರೆ ನಮ್ಮ ವೀರಶೈವ ಶರಣರು. ಏಕೆಂದರೆ ಆಹಾರವನ್ನು ಬೆಳೆಯದೆ ಇದ್ದಲ್ಲಿ ಅನ್ನಮಯ ಶರೀರದ ಪೋಷಣೆಯಾದರೂ ಹೇಗೆ ಸಾಧ್ಯ ? ಆದ್ದರಿಂದಲೇ ಸರ್ವಜ್ಞ ಕವಿಯು,

"ಕೋಟಿ ವಿದ್ಯೆಗಳಿಗಿಂತ
ಮೇಟಿ ವಿದ್ಯೆಯೇ ಮೇಲು"

ಎಂಬುದಾಗಿ ಹೇಳಿದ್ದಾನೆ. ಕೃಷಿಕ ಅಥವಾ ರೈತರ ಪಾತ್ರ ಬಹು ಹಿರಿದು. ಅಂತೂ ಕೃಷಿಯಾಗಲಿ, ವ್ಯಾಪಾರವಾಗಲಿ ಇನ್ನೊಬ್ಬರ ಬಳಿಯ ಕೂಲಿಯಾಗಲಿ ಎಲ್ಲವೂ ಪರಿಶುದ್ಧ ಕಾಯಕವಾದಾಗ ಶಿವಾರ್ಪಿತವೇ. ಇದನ್ನೇ ಬಸವಣ್ಣನವರು ತಮ್ಮ ವಚನ ಒಂದರಲ್ಲಿ ಹೇಳಿದ್ದಾರೆ.

"ನಾನು ಆರಂಭವ ಮಾಡುವೆನಯ್ಯಾ
ಗುರು ಪೂಜೆಗೆಂದು.
ನಾನು ಬೆನಹಾರವ ಮಾಡುವೆನಯ್ಯಾ
ಲಿಂಗಾರ್ಚನೆಗೆಂದು.
ನಾನು ಪರ ಸೇವೆಯ ಮಾಡುವೆನಯ್ಯಾ
ಜಂಗಮ ದಾಸೋಹಕ್ಕೆಂದು॥".

ಕೃಷಿಯಲ್ಲಿ ಲೌಕಿಕ ಕೃಷಿಯೆಂದೂ, ಪಾರಮಾರ್ಥಿಕ ಕೃಷಿಯೆಂದೂ ಎರಡು ವಿಧ ಉಂಟು.

ಲೌಕಿಕ ಕೃಷಿಯ ಸೀಮೆಯಿಂದ ಪಾರಮಾರ್ಥಿಕ ಕೃಷಿಯ ವಿಶಾಲವಾದ ಸೀಮೆಗೆ ದಾಟಿದವರಲ್ಲಿ ನಮ್ಮ ಅಲ್ಲಮ ಪ್ರಭುದೇವರು ಪ್ರಧಾನರು. ಆಧ್ಯಾತ್ಮಿಕ ಕೃಷಿಯ ವಿಧಾನವನ್ನು ಅವರು ಹೀಗೆ ಹೇಳಿದ್ದಾರೆ:

"ತನುವ ತೋಟವ ಮಾಡಿ, ಮನವ ಗುದ್ದಲಿ ಮಾಡಿ,
ಅಗಿದು ಕಳೆದೆನಯ್ಯಾ ಭ್ರಾಂತಿಯ ಬೇರ.
ಒಡೆದು ಸಂಸಾರದ ಹೆಂಟೆಯ ಬಗೆದು,
ಬಿತ್ತಿದೆನಯ್ಯಾ ಬ್ರಹ್ಮ ಬೀಜವ.
ಅಖಂಡ ಮಂಡಲವೆಂಬ ಬಾವಿ; ಪವನವೇ ರಾಟಾಳ
ಸುಷುಮ್ನ ನಾಳದಿಂದುದಕವ ತಿದ್ದಿ
ಬಸವಗಳೈವರು ಹಸಗೆಡಿಸಿಹರೆಂದು
ಸಮತೆ ಸೈರಣೆ ಎಂಬ ಬೇಲಿಯನಿಕ್ಕಿ
ಆವಾಗಲೂ ಈ ತೋಟದಲ್ಲಿ ಜಾಗರವಿದ್ದು
ಸಸಿಯ ಸಲಹಿದೆ ಕಾಣಾ ಗುಹೇಶ್ವರ."

ಕಾಯಕದಿಂದಾಗುವ ಪ್ರಯೋಜನಗಳನ್ನು ಒಂದೇ ಮಾತಿನಲ್ಲಿ ಹೇಳುವುದಾದರೆ ಅದರಿಂದ ವ್ಯಕ್ತಿ ತನ್ನ ಆತ್ಮೋದ್ಧಾರವನ್ನು ಕಂಡುಕೊಳ್ಳಬಹುದು. ಕಾಯಕದಿಂದ ಮಾನವ ಕಲ್ಯಾಣವಾಗುತ್ತದೆ ಎಂದು ಹೇಳಬಹುದು.

"ಮಾನವನ ತನು, ಮನ, ಧನಗಳಿಗೆ ಕಳೆಯನ್ನೇರಿಸುವ ಕಲೆಗಾರಿಕೆ ಕಾಯಕದಲ್ಲಿದೆ. ಕಾಯಕದಿಂದ ಕಾಯಕ ಆರೋಗ್ಯ ಉಂಟಾಗುತ್ತದೆ. ಆರೋಗ್ಯದಿಂದ ಆಯುಷ್ಯ ವೃದ್ಧಿಯಾಗುತ್ತದೆ. ಮನಸ್ಸು ನಿರ್ಮಲವಾಗಿ ನಿಶ್ಚಲವಾಗುತ್ತದೆ. ಧನಾಭಿವೃದ್ಧಿಯಾಗಿ ಧರ್ಮಕಾರ್ಯಗಳಿಗೆ ಮನಸ್ಸು ಬಾಗುತ್ತದೆ. ಧರ್ಮದಿಂದ ಸುಖ ಶಾಂತಿ ಸತ್ಕೀರ್ತಿಗಳು ಲಭಿಸುತ್ತವೆ. ಆದುದರಿಂದ ಕಾಯಕವನ್ನು ಶ್ರೇಷ್ಠ ಕಲೆ ಎಂಬ ಹೆಸರಿನಿಂದ ಕರೆಯಬಹುದು. ಕಾಯಕವು ಕೇವಲ ಕಲೆಯಲ್ಲ, ಜೀವನ ಕಲೆ, ಜೀವಂತ ಕಲೆಯಾಗಿದೆ."*9.

ಕಾಯಕವು ಶ್ರೇಷ್ಠವಾದ, ಜೀವಂತ ಕಲೆಯಾಗಿರುವುದರಿಂದ ಪ್ರತಿಯೊಬ್ಬರೂ ತಪ್ಪದೇ ಕಾಯಕವನ್ನು ಆಚರಿಸಬೇಕೆಂದು ಹೇಳಿದಂತಾಯಿತು. ಸೋಮಾರಿಯಾಗಿ ಕುಳಿತವನ ಮನಸ್ಸು ಸ್ಥಿಮಿತದಲ್ಲಿ ಇರುವುದಿಲ್ಲ ಮತ್ತು ಅನೇಕ ದುಷ್ಟ ಯೋಚನೆಗಳನ್ನು ಮಾಡುವುದು. ಇದರಿಂದ ಅನೇಕ ಅನರ್ಥ ಪರಂಪರೆ ಸಂಭವಿಸುವ ಅವಕಾಶ ಉಂಟು. ಆದ್ದರಿಂದಲೇ ಆರಾಮ್ ಹರಾಮ್ ಹೈ! ಎಂಬುದಾಗಿ ನೆಹರೂಜಿಯವರು ಹೇಳಿದ್ದಾರೆ. ಕಾಯಕ ಮಾಡುವುದರಿಂದ ಇವೆಲ್ಲವೂ ತಪ್ಪಿ, ಅರ್ಥಾತ್ ಅನರ್ಥ ಪರಂಪರೆಗಳ ಸಂಭವವು ತಪ್ಪಿ ಮನಸ್ಸು ಪರಿಶುದ್ಧವಾಗುತ್ತದೆ ಮತ್ತು ಪರಮಾತ್ಮನ ಪಾದಾರವಿಂದಗಳಲ್ಲಿ ಲೀನವಾಗಿ ಸದಾ ಪರಮಾನಂದರಸಾಮೃತವನ್ನು ಪಾನಮಾಡುತ್ತದೆ.

"The inevitable consequence of poverty is dependence" ಎಂದು Dr. Samuel Johnson ಹೇಳಿದ್ದಾನೆ. ಆದರೆ ಬಡತನವು ಸ್ವಾವಲಂಬನೆಯಿಂದ ಅರ್ಥಾತ್ ಪರಿಶುದ್ಧ ಕಾಯಕದಿಂದಲೇ ನಿವಾರಣೆಯಾಗುತ್ತದೆ ಎಂಬುದನ್ನು ಒಪ್ಪಲೇಬೇಕು ಇದನ್ನೇ—

"ಚಿತ್ತ ಶುದ್ಧನಾಗಿ ಕಾಯಕವ ಮಾಡುವ
ಸದ್ಭಕ್ತಂಗೆ ಎತ್ತ ನೋಡಿದಡೆ ಅತ್ತ
ಲಕ್ಷ್ಮಿ ತಾನೇ ತಾನಾಗಿಪ್ಪಳು"

---

9. "ಕಾಯಕ ಕಲೆ". ⓑ ಜ. ಚ. ನಿ. ಪುಟ 5.

ಎಂಬುದಾಗಿ ಮಹಾ ಶಿವಶರಣೆ ಲಕ್ಕಮ್ಮ ಹೇಳಿದ್ದಾಳೆ.

ಕಾಯಕ ಎನ್ನುವುದು "ಚಿಕ್ಕ ಪದವಾದರೂ ದೊಡ್ಡ ಅರ್ಥವನ್ನು ಹೊಂದಿರುವ ಸಮರ್ಥ ಪದವಾಗಿದೆ. ಅದು (ಕಾಯಕ) ಪ್ರತಿ ಮಹಾದ್ವಾರವನ್ನು ತೆರೆಸಿಕೊಡುವ ದಿವ್ಯ ಮಂತ್ರವಾಗಿದೆ. ಜಗತ್ತಿನಲ್ಲಿ ಸಮಾನತೆಯನ್ನು ಸ್ಥಾಪಿಸುವ ಮಹತ್ತರ ಸಾಧನವಾಗಿದೆ. ಮಾನವನ ದುರ್ಗುಣದ ಅವಲೋಹವನ್ನೆಲ್ಲಾ ಸದ್ಗುಣದ ಬಂಗಾರವಾಗಿ ಪರಿವರ್ತಿಸುವ ಪರುಷ ಶಿಲೆಯಾಗಿದೆ".

## ದಕ್ಷಿಣ ಮೈಲಾರಲಿಂಗೇಶ್ವರನ ವಚನಗಳು.

ಆ ಮಠದ ಗುರುವುಂಟು, ಈ ಮಠದ ಮಹಂತ ವಿರಕ್ತ ಜಂಗಮ ಚರ ಅನುಚರರುಂಟು- ಎಂದು ಕಲ್ಯಾಣ ಮಂದಿರದಲ್ಲಿ ಮದುವೆಯ ಸಮಾರಂಭದಲ್ಲಿ ಅಗ್ರ ತಾಂಬೂಲವನು ನೀಡುವರು ನೋಡಾ ! ಶಿವಪಥದಲ್ಲಿಯೂ ಪರಲೋಕ ಯಾತ್ರೆಯಲಿ ಈ ಪುರುಷ ಪುಂಗವರಿಗೆ ಅಗ್ರತಾಂಬೂಲಮರ್ಯಾದೆ ತಪ್ಪದಿರಲಯ್ಯಾ ! "ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ," ಎಂಬ ಭಕ್ತವತ್ಸಲ ಬಸವಣ್ಣನ ಮಾತು ನೆನಪಿಹುದಯ್ಯ ಶ್ರೀ ಮಾಲತೀಪ್ರಿಯ ದಕ್ಷಿಣ ಮೈಲಾರಲಿಂಗೇಶ್ವರಾ !

ಮಠದೊಡೆಯರು ಲಿಂಗೈಕ್ಯರಾದರೆ ಮಠದ ಆವರಣದಲ್ಲಿ ಸಮಾಧಿಯಾಗುವರಯ . ಮನೆಯೊಡೆಯ ಲಿಂಗೈಕ್ಯರಾದರೆ ಮನೆಯಾಚೆ ರುದ್ರ ಭೂಮಿಯಲಿ ಸಮಾಧಿಯಾಗುವರಯ್ಯಾ ! ಮಠಮಸಣವಾಯಿತ್ತು; ಮನೆ ಕೈಲಾಸವಾಯಿತ್ತು ! ರುದ್ರಭೂಮಿಯು ಶ್ರೀ ಮಾಲತೀಪ್ರಿಯ ದಕ್ಷಿಣ ಮೈಲಾರಲಿಂಗದೇವನ ಕ್ಷೇತ್ರವಾಯಿತ್ತು ನೋಡಾ !

ರಾಜರಾಜರ ಚಕ್ರವರ್ತಿಯ ಮುಖಮುದ್ರೆ ಇದ್ದ ಕಾಸು ಕಾಲಾಣೆ ಅರ್ಧಾಣೆ ಒಂದಾಣೆ ಎರಡಾಣೆ ನಾಲ್ಕಾಣೆ ಎಂಟಾಣೆ ರೂಪಾಯಿ ನಾಣ್ಯಗಳೊಂದು ಕಾಲದಲಿ ಚಲಾವಣೆಯಲಿದ್ದುವು ನೋಡಾ ! ಆ ಮೇಲೆ ಗಾಂಧಿ ನೆಹರು ಅಶೋಕ ಚಕ್ರ ಮುದ್ರಾಂಕಿತ ನಾಣ್ಯ ನಾಣ್ಯಶ್ರೇಣಿ ಚಲಾವಣೆಯಲ್ಲಿ ಬಂತು ನೋಡಾ ! ಕಾಲ ಕಾಲಕೆ ನಾಣ್ಯ ಬೇರೆ ಬಂದಂತೆ ಹಳೆಯ ನಾಣ್ಯ ಬೆಲೆಯಿಲ್ಲದಂತಾಯ್ತು ನೋಡಾ! ಅಂತಯೇ, ನಿರಂಜನ, ಶಿವಯೋಗಿ, ಜಗದ್ಗುರು, ಅಡ್ಡಪಾಲಕಿ, ಸಿಂಹಾಸನಾಧೀಶ್ವರ ಎಂಬ ಮುದ್ರೆಯೊತ್ತಿದ ಹಳೆಯ ಬಿರುದಿನ ಪದ ನಾಣ್ಯಗಳ ಬೆಲೆ ಇಳಿಮುಖವಾಯ್ತು ಪೇಟೆಯಲಿ ನೋಡಾ ! ಈ ಹಳೆಯ ನಾಣ್ಯಗಳೆಲ್ಲ ವಸ್ತು ಸಂಗ್ರಹಾಲಯದ ದಾರಿಯಲಿ ನಡೆದು ಸವೆಯುತಿದೆ ವಿಜ್ಞಾನಯುಗದಲ್ಲಿ ನೋಡಾ ! ಇಪ್ಪತ್ತೊಂದನೆಯ ಶತಮಾನೋದಯ ಮೂಡಲಗೆಂಪು ಕಾಣುತಿದೆ ನೋಡಾ ಶ್ರೀ ಮಾಲತೀಪ್ರಿಯ ದಕ್ಷಿಣ ಮೈಲಾರ ಲಿಂಗೇಶ್ವರಾ !

ರಾಜರಿಲ್ಲದ ನಾಡಿನಲಿ ರಾಜಗುರುವಿನ್ನೆಲ್ಲಿ ? ಶ್ರೀ ಮಾಲತೀಪ್ರಿಯ ದಕ್ಷಿಣ ಮೈಲಾರಲಿಂಗೇಶ್ವರಾ ನೀನಿಲ್ಲದಲ್ಲಿ ನಾನುಂಟೆ ?

ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ ಭೃತ್ಯಾಚಾರ ಎಂಬ ಪಂಚಾಚಾರಗಳು ಪೃಥ್ವಿ ಅಪ್ಪು ಅಗ್ನಿ ವಾಯು ಗಗನವೆಂಬ ಪಂಚಭೂತಲಿಂಗ ಪರ್ಯಾಯದಿಂದ ಭೂತೇಶ ಪಂಚಮುಖ ಶಿವನೆಂದರೆ ನೀನೇ ಶ್ರೀಮಾಲತೀಪ್ರಿಯ ದಕ್ಷಿಣ ಮೈಲಾರಲಿಂಗೇಶ್ವರನೆಂಬುದನು ಬಲ್ಲೆ, ನಿನ್ನಾಣೆ.

'ಹರನ ಮುಡಿಯಿಂದ ಹರಿಯ ಅಡಿಯಿಂದ' ಗಂಗೆಯನು ಹರಿದುಬಾ ಎಂದು ಹಾಡಿ ಕುಣಿದಾಡಿದ ಕವಿಸಂತರುಂಟಯ್ಯ ! 'ಹರಿಯ ಅಡಿಯಿಂದ' ಗಂಗೆ ಹರಿದು ಬರುವಳೆಂಬುವದನೇ ಈ ಕವಿಸಂತರೆಲ್ಲಿ ಕಲಿತರೊ ! ವಿಷ್ಣುಪದವೆಂದರೆ ಆಕಾಶವೆಂಬುದನರಿಯದೆ, ವಿಷ್ಣುಪದೋದ್ಭವೆಯೆಂದರೆ ಆಕಾಶಸುಜಾತೆ ಗಂಗೆಯೆಂಬುದನು ತಿಳಿಯದೆ ಗಳಹುವರಯ್ಯ ಮೋಡಿಯಲಿ ! ಅವರ ಮನದ ಮೈಲಿಗೆ ಹರಿದಿಲ್ಲವೆಂಬುದನು ಬಲ್ಲ ಶ್ರೀ ಮಾಲತೀಪ್ರಿಯ ದಕ್ಷಿಣ ಮೈಲಾರಲಿಂಗೇಶ್ವರನು.

**ವಿದ್ಯಾವಿಭೂಷಣ ಓ. ಎನ್. ಲಿಂಗಣ್ಣಯ್ಯ.**

ಸಿದ್ಧಗಂಗಾ

# ಯದಾ ಯದಾ ಹಿ ಧರ್ಮಸ್ಯ....

—ಎಸ್. ಕೃಷ್ಣಭಟ್ಟ, ಇಂಗ್ಲಿಷ್ ಅಧ್ಯಾಪಕ, ಆಚಾರ್ಯ ಪಾಠಶಾಲಾ ಸಂಜೆ ಕಾಲೇಜು, ಬೆಂಗಳೂರು.

'ಧರ್ಮ' ಎಂಬುದು ಒಂದು ವ್ಯಾಪಕವಾದ ಶಬ್ದ. 'ಧಾರ್ಯತೇ ಅನೇನ ಇತಿ ಧರ್ಮಃ' ಅಂದರೆ ಯಾವುದರಿಂದ ಎಲ್ಲವೂ ಧರಿಸಲ್ಪಡುವುವೋ ಅದು ಧರ್ಮ. ಈ ಸಂಸ್ಕೃತ ಶಬ್ದಕ್ಕೆ ಇತರ ಭಾಷೆಗಳಲ್ಲಿ ಪರ್ಯಾಯ ಪದಗಳನ್ನು ಹುಡುಕುತ್ತಾ ಹೋದರೆ, ಅವುಗಳ ಗುಂಪನ್ನೇ ಪೂರ್ತಿಯಾಗಿ ಇಟ್ಟರೂ ಇದರ ತುಂಬು ಅರ್ಥ ಬರಲಾರದು. ವೈದಿಕ ಧರ್ಮ, ಲೌಕಿಕ ಧರ್ಮ, ಸತ್ಯ, ನ್ಯಾಯ, ಅಹಿಂಸೆ, ಉಪಕಾರ ಮುಂತಾದ ಸಾಮಾಜಿಕ ಧರ್ಮ ನೀತಿಗಳು, ಜೀವಾತ್ಮ-ಪರಮಾತ್ಮನ ಸಂಬಂಧ– ಹೀಗೆ ನಾನಾ ಅಂಶಗಳು ಕೂಡಿದ ಒಂದು ಪೂರ್ಣ ಶಬ್ದವೇ 'ಧರ್ಮ.'

ವಿಮರ್ಶಾತ್ಮಕ ಅಧ್ಯಯನಕ್ಕೆ ತಕ್ಕ ದೊಡ್ಡ ಕ್ಷೇತ್ರಗಳಲ್ಲಿ ಭಾರತೀಯ ಧರ್ಮ ಪರಂಪರೆ ಒಂದು. ಪ್ರಾಚೀನ ಕಾಲದಲ್ಲಿದ್ದ ಚಾರ್ವಾಕ ಪಂಥವು 'ದೇಹಕ್ಕಿಂತ ಬೇರೆ ಯಾವ ಆತ್ಮ ಇಲ್ಲ' ಎಂದು ಸಾರಿತು; ಇದು ಸಂಶೋಧಕನ ದೃಷ್ಟಿಯಲ್ಲಿ ಪರಮ ತತ್ವ ಮಾರ್ಗದ ಮೊದಲನೆಯ ಮೆಟ್ಟಲು. ಪ್ರಕೃತಿ-ಪುರುಷರ ಸಂಬಂಧವನ್ನು ತಿಳಿಸುವ ಸಾಂಖ್ಯಮತ ಇನ್ನೊಂದು ಮೆಟ್ಟಲು. ಹೀಗೆಯೇ ವಿಧ ವಿಧವಾದ ಮೆಟ್ಟಲುಗಳನ್ನು ಏರುತ್ತಾ ಹೋದರೆ ನಮಗೆ ತುಟ್ಟತುದಿಯಲ್ಲಿ ಸಿಗುವುದು ಉಪನಿಷತ್ತುಗಳ ಆಧ್ಯಾತ್ಮವಾದ. ಈ ಮಹಾ ಧರ್ಮ ವೃಕ್ಷದ ಬಿಳಲು ಬೇರುಗಳಂತೆ ಒಂದಾಗಿಯೂ ಬೇರೆಯಾಗಿಯೂ ಬೆಳೆದು ಬಂದ ಜೈನ, ಬೌದ್ಧ, ಸಿಖ್ ಮುಂತಾದ ಪಂಥಗಳ ತತ್ವಗಳೂ ಇವೆ.

ಹೊರನೋಟಕ್ಕೆ ವಿಚಿತ್ರ ವೈವಿಧಗಳು ಕಂಡುಬಂದರೂ ಭಾರತದ ಸನಾತನ ಧರ್ಮವೆಂಬುದು ಅನೇಕತೆಯಲ್ಲಿ ಏಕತೆಯನ್ನು ತೋರಿಸುವ ಒಂದು ಮಹಾ ವೃಕ್ಷ. ವೇದದ ಕಾಲದಿಂದಲೂ ಪರಿಶೀಲಿಸಿ ನೋಡಿದರೆ ನಮಗೆ ಕಾಣುವುದು ಈ ವೃಕ್ಷದ ಅಸಂಖ್ಯಾತ ಶಾಖೆಗಳು; ಆದರೂ ಇದರಲ್ಲಿ ಸಾವಿರಾರು ವರ್ಷಗಳಿಂದ ಪ್ರವಹಿಸುತ್ತಿರುವ ಮೂಲ ಸ್ರೋತ್ರ ಒಂದೇ. ವಿಶ್ವದ ಯಾವ ಧರ್ಮ ವೃಕ್ಷವೇ ಆಗಲಿ, ಅದಕ್ಕೆ ಆಗಾಗ್ಗೆ ನಾನಾ ವಿಧವಾದ ರೋಗ ರುಜಿನಗಳು ತಗಲುವುವು. ಬಾಹ್ಯಾಚಾರಗಳು, ಅನ್ಯ ಮತವನ್ನು ಅವಹೇಳನ ಮಾಡುವುದು ಮಿತಿಮೀರಿದರೆ, ಧರ್ಮದ ತಿರುಳಿಗೇ ಧಕ್ಕೆಯುಂಟಾಗುವುದು. ಆಯಾ ಧಾರ್ಮಿಕ ಪಂಥದ ಮಹಾಪುರುಷರು ತಮ್ಮ ಉದಾರ ಹೃದಯದಿಂದ ಆಯಾ ಕಾಲಕ್ಕೆ ಮಾಡಿದ ಉಪಕಾರವನ್ನು ಪಂಥದ ಅನುಯಾಯಿಗಳಲ್ಲಿ ಅನೇಕರು ಹಾಳು ಮಾಡುವರು. ಸುಪ್ರಸಿದ್ಧ ಆಂಗ್ಲೇಯ ವಾಗ್ಮಿ ಕಾರ್ಲೈಲನ ಮಾತಿನಂತೆ ಜನ ಅಪನಂಬಿಕೆಯಿಂದ ನರಳುವರು. ಅಥವಾ ಕವಿ ಟೆನಿಸನ್ ಹೇಳಿರುವಂತೆ ಪಂಥವು ಒಳ್ಳೆಯ ಸ್ಥಿತಿಯಲ್ಲಿದ್ದರೂ, ಯಾವ ಒಂದು ಒಳ್ಳೆಯ ಪಂಥ ಅಥವಾ ಸಂಪ್ರದಾಯವೂ ಜಗತ್ತನ್ನು ಅನೀತಿಗೊಳಿಸಬಾರದು ಮತ್ತು ಇದಕ್ಕಾಗಿ ಬದಲಾವಣೆಯೂ ಆಗುತ್ತಿರಬೇಕು. ಇಂಥ ಪರಿಸ್ಥಿತಿಯನ್ನು ಸುಧಾರಿಸಲು ಮಹಾಪುರುಷರ ಅವತಾರವಾಗುವುದು. ಅವರು ಆಗಿನ ಪರಿಸ್ಥಿತಿಗೆ ಅನುಗುಣವಾಗಿ ಧರ್ಮಕ್ಕೆ ಒಂದು ರೂಪವನ್ನು ಕೊಡುವರು. ಈ ಮಾತು ಜಗತ್ತಿನ ಎಲ್ಲಾ ಧರ್ಮಗಳಿಗೂ, ಅವರಲ್ಲಿ ವಿಶೇಷವಾಗಿ ನಮ್ಮ ಪುರಾತನ ದೇಶದ ಸನಾತನ ಧರ್ಮಕ್ಕೆ ಅನ್ವಯಿಸುವುದು.

ಧರ್ಮೋದ್ಧಾರದ ಕಾರ್ಯದಲ್ಲಿ ಆಯಾಕಾಲದ ಸನ್ನಿವೇಶಕ್ಕೆ ತಕ್ಕಂತೆ ಅಗತ್ಯವಾದ ಕರ್ತವ್ಯಗಳು ಮಹಾಮಹಿಮರ ದಿವ್ಯ ಚೇತನಗಳಿಂದ ನೆರವೇರುತ್ತಲೇ ಬಂದಿವೆ. ಆದರೆ ಈಗ ಆಗಿರುವುದು, ಆಗುತ್ತಿರುವುದು ಏನು? ಧರ್ಮದ ಇತಿಹಾಸವನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ, ಅನೇಕ ಧಾರ್ಮಿಕ ಚೇತನಗಳನ್ನು ತಪ್ಪಾಗಿ ತಿಳಿದುಕೊಂಡಿರುವುದು

ಅಸಂಖ್ಯಾತ ಗುಂಪುಗಳ ಸೃಷ್ಟಿಯು ಅತಿರೇಕ. ಪಂಥಗಳ ಶಿಷ್ಯರು ತಮ್ಮದೇ ಆದ ಗುಂಪುಕಟ್ಟಿ, ಮಹಾಮಹಿಮರ ಮಹತ್ಕಾರ್ಯವನ್ನು ಹೇಳ ಹೆಸರಿಲ್ಲದಂತೆ ಮಾಡಲು ಪ್ರಯತ್ನಿಸುವರು. ಕ್ರಮೇಣ ಬಾಹ್ಯಾಚಾರಗಳಿಗೆ ಪ್ರಾಧಾನ್ಯ ಸಿಕ್ಕಿ, ಪಂಥದ ಅಂತಸ್ಸತ್ವ ಹೊರಟು ಹೋಗುವುದು. ಜನರ ಪಂಥ ಒಂದು ನಿರ್ದಿಷ್ಟ ಕಾಲದಲ್ಲಿ ಪ್ರಾರಂಭವಾಗಿದ್ದರೂ, ತಮ್ಮ ಪಂಥಕ್ಕೆ ಅನಾದಿತ್ವವನ್ನು ಕಲ್ಪಿಸಿಕೊಡುವ ಚಿತ್ರಪಟದ ವೃಕ್ಷಗಳನ್ನೂ, ಪುರಾಣಗಳನ್ನೂ ಸೃಷ್ಟಿಮಾಡುವರು ಮಹಾಧರ್ಮವೃಕ್ಷಕ್ಕೆ ತಮ್ಮದೂ ಒಂದು ಕಾಲದಲ್ಲಿ ಬಂದ ಶಾಖೆಯೆಂಬುದು ಅವರಿಗೆ ಮರೆತು ಹೋಗುವುದು; ಅಪೂರ್ವ ಚೇತನಗಳಿಂದ ಆಯಾಕಾಲದಲ್ಲಿ ಆದ ಉಪಕಾರದ ಸ್ಮರಣೆಯೇ ಇಲ್ಲದಂತಾಗುವುದು. ಈ ವಿಚಾರದಲ್ಲಿ ಕೆಲವು ಧರ್ಮಗುರುಗಳಿಗೆ, ಆಚಾರ್ಯರಿಗೆ ಅನ್ಯಪಂಥೀಯವರಿಂದ ಆಗಿರುವ ಅಪಚಾರ ಅಷ್ಟಿಷ್ಟಲ್ಲ. ಆ ಕೆಲವು ಗುಂಪಿನವರು - ಅವರಲ್ಲಿ ವಿದ್ವಾಂಸರೆನಿಸಿಕೊಂಡವರು ಕೂಡ-ತಮ್ಮ ಭಾಷಣಗಳಲ್ಲೂ, ಲೇಖನಗಳಲ್ಲೂ ವಿದೇಶೀಯರನ್ನಾದರೂ ಉಲ್ಲೇಖ ಮಾಡಿಯಾರು, ಆದರೆ ತಮಗೆ ಉಪಕಾರ ಮಾಡಿದ ಇಲ್ಲಿನ ದಿವ್ಯ ಚೇತನಗಳ ಹೆಸರನ್ನು ಮರೆತೂ ಕೂಡ ಹೇಳುವುದಿಲ್ಲ. ಇನ್ನು ತಮ್ಮ ಗುಂಪಿನವರಿಗೆ ವಿವಿಧರೀತಿಯ ಅನುಕೂಲ ಮಾಡಿಕೊಡುವ ಕ್ಷುಲ್ಲಕ ಪ್ರಯತ್ನಗಳು, ಅನ್ಯ ಪಂಥದವರಿಗೆ ಚಿತ್ರ ಹಿಂಸೆಕೊಡುವುದು, ನಾನಾರೀತಿಯಲ್ಲಿ ಮತಾಂತರಕ್ಕೆ ಪ್ರಯತ್ನಿಸುವುದು-ಇವುಗಳಿಗೆಲ್ಲಾ ಭಾರತ, ಯೂರೋಪ್ ಮುಂತಾದ ಪ್ರದೇಶಗಳ ಇತಿಹಾಸಕ್ಕಿಂತ ಬೇರೆ ಸಾಕ್ಷಿ ಬೇಕೆ ?

ನಮ್ಮ ಭಾರತಕ್ಕೆ ಸಂಬಂಧಪಟ್ಟಂತೆ ಧರ್ಮೋದ್ಧಾರದ ದಿಸೆಯಲ್ಲಿ ಸರ್ವತ್ಯಾಗ ಮಾಡಿದ ಲಕ್ಷಾಂತರ ದಿವ್ಯ ಜೀವಗಳಿಂದ ಆಗಿನ ಸನ್ನಿವೇಶಕ್ಕೆ ತಕ್ಕಂತೆ ಏನೇನು ಉಪಕಾರವಾಯಿತು ಎಂಬುದನ್ನು ಸ್ಥೂಲವಾಗಿ ಪರಿಶೀಲಿಸೋಣ.

ವೇದಗಳ ಕಾಲದಲ್ಲಿ ಪ್ರಕೃತಿಯ ವಿವಿಧ ಶಕ್ತಿಗಳನ್ನು ಒಲಿಸಿಕೊಳ್ಳುವುದೇ ಮುಖ್ಯವಾಗಿದ್ದಂತೆ ತೋರುವುದು. ಅದಕ್ಕಾಗಿಯೇ, ವೈದಿಕ ಸಾಹಿತ್ಯದಲ್ಲಿ ಇಂದ್ರ, ಅಗ್ನಿ, ವರುಣ ಮುಂತಾದ ದೇವತೆಗಳು ಪ್ರಮುಖರಾದರು; ಅವರನ್ನು ತೃಪ್ತಿಗೊಳಿಸಲು ಋಷಿಗಳೂ ಹೋಮ ಹವನಗಳನ್ನು ಜಾರಿಗೆ ತಂದರು. ಋಷ್ಯಾಶ್ರಮಗಳಲ್ಲಿ ವೇದ ಮಂತ್ರಗಳನ್ನೂ, ಹಾಗೆಯೇ ಪರಮಾರ್ಥ ಜ್ಞಾನಕ್ಕಾಗಿ ಉಪನಿಷತ್ ಮುಂತಾದುವುಗಳನ್ನು ಶಿಷ್ಯರಿಗೆ ಬೋಧಿಸಲಾಗುತ್ತಿತ್ತು. ಇವರು ವಿದ್ಯಾಭ್ಯಾಸದ ನಂತರ ತಮ್ಮ ಊರಿಗೆ ಹಿಂತಿರುಗಿ, ತಮ್ಮ ಧಾರ್ಮಿಕ ಶಿಕ್ಷಣದ ಫಲವನ್ನು ಪೌರೋಹಿತ್ಯ, ಧರ್ಮ ಪ್ರವಚನಾದಿಗಳ ಮೂಲಕ ಜನ ಸಾಮಾನ್ಯಕ್ಕೆ ಹಂಚುತ್ತಿದ್ದರು.

ಇದು ಸನಾತನ ಧರ್ಮಕ್ಕೆ ಋಷಿಗಳಿಂದ ಆದ ಪರಮ ಉಪಕಾರ.

ಪುರಾಣಗಳ ಕಾಲದಲ್ಲಿ ವೇದ ಹಾಗೂ ವೇದಾಂತದ ದಿವ್ಯತತ್ವವನ್ನು ಜನಸಾಮಾನ್ಯರಿಗೆ ತಿಳಿಸಲು ಶಿಕ್ಷಣ ಮಾಧ್ಯಮವನ್ನು ಸುಧಾರಿಸಬೇಕಾಗಿ ಬಂದಿರಬಹುದು. ಅದರ ಫಲಿತಾಂಶ ಪುರಾಣಗಳ ರಚನೆ, ಹಾಗೆಯೇ ಸರ್ವಾಂತರ್ಯಾಮಿಯಾದ ಪರಮಾತ್ಮನ ವಿವಿಧ ಶಕ್ತಿಗಳನ್ನು ಜನಸಾಮಾನ್ಯಕ್ಕೆ ಅರ್ಥವಾಗುವಂತೆ ಮೂವತ್ತುಮೂರುಕೋಟಿ ದೇವತೆಗಳ ಕಲ್ಪನೆ, ಮೂರ್ತಿಗಳಲ್ಲಿ ದೇವತಾ ಆವಾಹನೆ, ವಿವಿಧ ಪೂಜಾ ಪದ್ಧತಿಗಳು - ಇವೆಲ್ಲಾ ಬಂದವು. ಈ ಎಲ್ಲಾ ವ್ಯವಸ್ಥೆಗಾಗಿ ಎಷ್ಟು ಮಹನಿಯರ ಕಾಣಿಕೆ ಸಂದಿರಬೇಕು !

ಹೀಗೆಯೇ ಶತಮಾನಗಳು ಉರುಳುತ್ತಾ ಬಂದಂತೆಲ್ಲಾ ಪ್ರಾಣಿಬಲಿ ಮುಂತಾದ ಬಾಹ್ಯಾಚಾರಗಳು ಪ್ರಬಲವಾದುವು. ಸನಾತನಧರ್ಮ ವೃಕ್ಷಕ್ಕೆ ತಗುಲಿದ ಈ ಭಾರೀ ಉಪದ್ರವಗಳಿಗೆ, ಹಿಂಸೆಗೆ ಮದ್ದಾಗಿ, ಈ ವೃಕ್ಷದ ಬಿಳಲುಬೇರುಗಳ ರೂಪದಲ್ಲಿ ಜೈನ, ಬೌದ್ಧ ಪಂಥಗಳು ಜನ್ಮತಾಳಿದವು, ಧರ್ಮದಲ್ಲಿ ಮೊದಲಿನಿಂದಲೂ ಮುಖ್ಯ ಅಂಗವಾಗಿದ್ದ ಅಹಿಂಸೆಗೆ ಇನ್ನೂ ಹೆಚ್ಚಿನ ಸ್ಥಾನ ಕೊಡಲಾಯಿತು.

ಬುದ್ಧನು ಹೇಳಿದನೆನ್ನಲಾದ "ಆತ್ಮದ ಕ್ಷಣಿಕತೆ"ಯ ತತ್ವವು ವೇದಾಂತಿಗಳಿಗೆ ಹಿಡಿಸಲಿಲ್ಲ. ಅಲ್ಲದೆ ಬೌದ್ಧ, ಜೈನ ಪಂಥಗಳ ಆಚರಣೆಗಳೂ ಕ್ರಮೇಣ ವಿಪರೀತಕ್ಕೆ

ಹೋದುವು. ಹಾಗೆಯೇ ಸನಾತನ ಧರ್ಮದ ಹೆಸರಿನಲ್ಲಿ ಪುನಃ ಮಿತಿಮೀರಿದ ಬಾಹ್ಯಾಚಾರಗಳು, ವಾಮಾಚಾರಗಳು, ಕಾಪಾಲಿಕರವೇ ಮುಂತಾದ ವಿಪರೀತ ಪಂಥಗಳು ತಲೆಯೆತ್ತಿದುವು. ಹೀಗಿದ್ದಾಗ, ಭಾರತೀಯ ಧರ್ಮದ ತಿರುಳಾದ ಉಪನಿಷತ್ತುಗಳ ತತ್ವವನ್ನು ಜನ ಸಾಮಾನ್ಯ ಕ್ರಮೇಣ ನಿರ್ಲಕ್ಷಿಸುತ್ತಾ ಬಂದಿರಬೇಕಷ್ಟೆ! ಆಗ ಬೌದ್ಧ ಧರ್ಮದ ಅತಿರೇಕವನ್ನು ತಡೆಗಟ್ಟಿ, ಅಂತಹ ಪಂಥಗಳ ಸ್ವರೂಪಕ್ಕೆ ಇಡೀ ಭಾರತವು ಬಲಿಯಾಗುವುದನ್ನು ತಪ್ಪಿಸುವುದು, ವಾಮಚಾರಾದಿಗಳನ್ನು ತುಳಿದು ಭಗವಂತನ ಉಪಾಸನೆಯ ಶ್ರೇಷ್ಠಮಾರ್ಗಗಳನ್ನು ಜನರಿಗೆ ತೋರಿಸುವುದು, ಶಿವ ಹೆಚ್ಚು, ವಿಷ್ಣು ಹೆಚ್ಚು ಮುಂತಾದ ಅಲ್ಪ ಭಾವನೆಗಳನ್ನು ದೂರೀಕರಿಸುವುದು, ಆಗಿನ ಕಾಲದಲ್ಲಿ ಭಾರತದಲ್ಲೆಲ್ಲಾ ತಿರುಗಿ ಪಂಡಿತರಿಗೂ, ಪಾಮರರಿಗೂ ಸೂಕ್ತ ರೀತಿಯಲ್ಲಿ ವೇದಾಂತದ ತತ್ವಗಳನ್ನು ತಿಳಿಯ ಹೇಳುವುದು ಮತ್ತು ಅದಕ್ಕೆ ಸಂಬಂಧಿಸಿದ ಗ್ರಂಥಗಳನ್ನು ರಚಿಸುವುದು - ಇಂಥಾ ಅದ್ಭುತ ಕಾರ್ಯಗಳನ್ನು ಕೇವಲ ಮೂವತ್ತೆರಡು ವರ್ಷಗಳ ಜೀವಮಾನದಲ್ಲಿ ಸಾಧಿಸಿ ಜಗತ್ತಿನ ತತ್ವ ಜ್ಞಾನಿಗಳ ಪಂಕ್ತಿಗೆ ಸೇರಿದ ದಿವ್ಯ ಚೇತನ ಶ್ರೀ ಶಂಕರಾಚಾರ್ಯರದು.

ಕ್ರಮೇಣ ಪರಮ ತತ್ವದ ಅರಿವು ಮಾಡಿಕೊಳ್ಳಲು ಜನಸಾಮಾನ್ಯಕ್ಕೆ ಹಿಂದಿನ ಧಾರ್ಮಿಕ ಪುರುಷರೂ, ಆಚಾರ್ಯರೂ ಹಾಕಿಕೊಟ್ಟ ಮೆಟ್ಟಲುಗಳು ಸಾಲದೆ ಬಂದುವು. ಸಂಸ್ಕೃತಕ್ಕೆ ಮಾತ್ರವಲ್ಲದೆ, ದೇಶ ಭಾಷೆಗಳಿಗೂ ಸ್ತೋತ್ರ ಸಾಹಿತ್ಯದಲ್ಲಿ ಸೂಕ್ತ ಸ್ಥಾನ ಕೊಡುವ ಆವಶ್ಯಕತೆ ಇತ್ತು. ವೇದಾಂತ ಗ್ರಂಥಗಳ ಅರ್ಥವನ್ನು ಏಕೆ ಪುನಃ ವಿಮರ್ಶೆ ಮಾಡಬಾರದು ಎಂಬ ಜಿಜ್ಞಾಸೆಯು ಕೆಲವರಲ್ಲಿ ಹುಟ್ಟಿತು ಆಗ, ಶ್ರೀ ಮಧ್ವಾಚಾರ್ಯರು, ಶ್ರೀ ರಾಮಾನುಜಾಚಾರ್ಯರೇ ಮುಂತಾದ ಪೂಜ್ಯ ಆಚಾರ್ಯರ ಪರಂಪರೆಯ ಅವತಾರವಾಯಿತು. ವೇದ ವಾಕ್ಯವನ್ನು ಅರ್ಥ ಮಾಡುವುದರಲ್ಲಿ ಸ್ವಲ್ಪ ಭೇದವಿದ್ದರೂ, ಅವರೂ ಕೂಡ ಭಕ್ತಿ ಪಂಥವನ್ನು ತಮ್ಮದೇ ಆದ ರೀತಿಯಲ್ಲಿ ಎತ್ತಿ ಹಿಡಿದು ಧರ್ಮಕ್ಷೇತ್ರದಲ್ಲಿ ಜನರಿಗೆ ಅತ್ಯಂತ ಉಪಕಾರ ಮಾಡಿರುವರು.

ಹಾಗೆಯೇ ಶ್ರೀ ಸಾಮಾನ್ಯನನ್ನು ಉದ್ಧಾರ ಮಾಡಲು ಭಕ್ತಿ ಪಂಥದಲ್ಲಿ ಇನ್ನೂ ಹೆಚ್ಚಿನ ವ್ಯವಸ್ಥೆಯ ಅಗತ್ಯ ಇದ್ದಿತು. ಆಗ ಹುಟ್ಟಿದ ರಾಮಭಕ್ತಿ ಶಾಖೆಯಲ್ಲಿ ಶ್ರೀ ತುಲಸಿದಾಸ, ಕಬೀರಾದಿಗಳು, ಕೃಷ್ಣಭಕ್ತಿಶಾಖೆಯಲ್ಲಿ ಶ್ರೀ ಸೂರದಾಸರು, ಮೀರಾ ಮುಂತಾದ ಭಕ್ತಾಗ್ರಣಿಗಳು, ಶ್ರೀ ಪುರಂದರದಾಸರೇ ಮೊದಲಾದ ಇತರ ದಾಸ ಪಂಥದವರು, ದಕ್ಷಿಣದ ವೈಷ್ಣವ ಪಂಥದ ಆಳ್ವಾರುಗಳೂ, ಶೈವ ಪಂಥದ ನಾಯನ್ಮಾರರು, ಶಿವಶರಣರು— ಇವರೆಲ್ಲರ ಕೃತಿಗಳ, ಆದರ್ಶ ಜೀವನದ ಕಾಣಿಕೆ ಸಾಮಾನ್ಯವಾದುದೇ? ಆಡು ಮಾತಿನಲ್ಲಿ ಸಮಾಜದ ದೋಷಗಳನ್ನು ಎತ್ತಿ ತೋರಿಸಿ, ಭಕ್ತಿರಸವನ್ನು ಸೂಸುವಂತಹ ಗೀತೆಗಳನ್ನು ರಚಿಸಿ ಜನಕ್ಕೆ ಒಳ್ಳೆಯ ಮಾರ್ಗವನ್ನು ತೋರಿಸಿದ ಈ ಚೇತನಗಳ ಶಕ್ತಿ ಎಷ್ಟು ಅಗಾಧವಾದುದು!

ಧರ್ಮ ವೃಕ್ಷಕ್ಕೆ ಬರುವ ರೋಗಗಳಿಗೆ ಕೊನೆಯುಂಟೆ? ಹಿಂದೆ ಒಂದು ಕಾಲದಲ್ಲಿ ಕೇವಲ ಸಾಮಾಜಿಕ ಕಾರ್ಯದ ಹಂಚಿಕೆಗಾಗಿ ಉಂಟಾದ ವರ್ಣಾಶ್ರಮ ವ್ಯವಸ್ಥೆಯನ್ನು ಜನ ದುರುಪಯೋಗ ಮಾಡಿಕೊಳ್ಳಲು ಪ್ರಾರಂಭಿಸಿದರು. ಧರ್ಮದ ಹೆಸರಿನಲ್ಲಿ ಡಾಂಬಿಕತನ, ಮೇಲು ಕೀಳೆಂಬ ಭಾವನೆ, ಅಸ್ಪೃಶ್ಯತೆ ಮುಂತಾದುವು ತಾಂಡವವಾಡಲು ಉಪಕ್ರಮಿಸಿದವು. ಇಂತಹ ದುಃಸ್ಥಿತಿಯನ್ನು ನಿವಾರಿಸಲು ಶ್ರಮಿಸಿದವರಲ್ಲಿ ಹೆಚ್ಚಿನ ಕೀರ್ತಿ ಶ್ರೀ ಅಲ್ಲಮಪ್ರಭು, ಬಸವಣ್ಣನವರೇ ಮೊದಲಾದ ಶಿವಶರಣರಿಗೆ ಸಲ್ಲುವುದು; ವಚನ ಸಾಹಿತ್ಯದ ನಿರ್ಮಾಣ ಈ ದಿಸೆಯಲ್ಲಿ ಒಂದು ಮಹತ್ವದ ಸಂಗತಿ. ಧಾರ್ಮಿಕ ಕ್ಷೇತ್ರದಲ್ಲಿ ಸಮಾಜ ಸುಧಾರಣೆಯ ಕೆಲಸ ಆರ್ಯ ಸಮಾಜ, ಬ್ರಹ್ಮ ಸಮಾಜಗಳಿಂದಲೂ ನಡೆಯಿತು.

ಹಾಗೆಯೇ ವಿದೇಶೀಯ ಐಹಿಕ ಭೋಗಾದಿಗಳಿಗೆ ಮಾರು ಹೋಗಿ, ತಮ್ಮ ಭವ್ಯಪ್ರಾಚೀನ ಧರ್ಮಕ್ಕೇ ತಿಲಾಂಜಲಿ ಕೊಡಲು ಹವಣಿಸುತ್ತಿದ್ದ ಪ್ರಜಾಕೋಟಿಗೆ ಪರಿಹಾರ ಶ್ರೀ ರಾಮಕೃಷ್ಣ ಪರಮಹಂಸರ, ವಿವೇಕಾನಂದರ ಅವತಾರ, ಶ್ರೀ ಅರವಿಂದರು, ಶ್ರೀ ರಮಣಮಹರ್ಷಿಗಳಂತಹ

ಯೋಗಿವರ್ಯರು ಹಾಗೂ ಇತರ ಸಾಧುಸಂತರು ಸಮಯಕ್ಕೆ ತಕ್ಕಂತೆ ಮಾಡಿದ ಉಪಕಾರಕ್ಕೆ ನಾವು ಎಷ್ಟು ಋಣಿಗಳಾಗಿರಬೇಕು ! ನಮ್ಮ ಹಿಂದಿನವರಂತೆ ರಾಜಕೀಯ ಹಾಗು ಧರ್ಮಗಳಲ್ಲಿ ಪರಸ್ಪರ ಸಾಮರಸ್ಯವನ್ನು ಕಲ್ಪಿಸಿಕೊಟ್ಟ ನಮ್ಮ ಪೂಜ್ಯ ಮಹಾತ್ಮಾ ಗಾಂಧಿಯವರ ನಿಜವಾದ ಬೆಲೆ ಕಂಡುಹಿಡಿಯಲು ಅವರಿಗೆ ತುಂಬಾ ಹತ್ತಿರದಲ್ಲಿರುವುದರಿಂದ ನಮ್ಮ ತಲೆಮಾರಿಗೆ ಸಾಧ್ಯವಾಗಿಲ್ಲ.

ಮೊದಲು ಋಷ್ಯಾಶ್ರಮಗಳ ನೈತಿಕ ಹಾಗೂ ಆಧ್ಯಾತ್ಮಿಕ ಬಲ ರಾಜರನ್ನು ಧರ್ಮಮಾರ್ಗದಲ್ಲಿ ಇಡಲು ಮುಖ್ಯ ಕಾರಣವಾಗಿತ್ತು. ಅನಂತರ ಆ ಸ್ಥಾನವನ್ನು ವಿವಿಧ ಪಂಥಗಳ ಗುರುಪೀಠಗಳೂ, ಪುಣ್ಯ ಕ್ಷೇತ್ರಗಳೂ, ಆಕ್ರಮಿಸಿದುವು. ಕಾಲಾನುಕ್ರಮದಲ್ಲಿ ಈ ಧಾರ್ಮಿಕ ಕ್ಷೇತ್ರಗಳಲ್ಲಿ ವಿಧ ವಿಧವಾದ ಭ್ರಷ್ಟಾಚಾರಗಳು, ಶ್ರೀಮಂತರಿಗೆ ಮಾತ್ರ ಮಾನ್ಯತೆ ಮುಂತಾದುವುಗಳು ಒಳಹೊಕ್ಕುದರ ಪರಿಣಾಮವಾಗಿ ಧಾರ್ಮಿಕ 'ಖೋಟಾನಾಣ್ಯಗಳೇ" ಹೆಚ್ಚಾಗುತ್ತಾ ಬಂದುವು. ಹೀಗಿದ್ದಾಗ್ಯೂ ಆಗಾಗ್ಗೆ ಕೊಳೆಯನ್ನು ದೂರಮಾಡಿ, ಆಧ್ಯಾತ್ಮಿಕ ಜಗತ್ತನ್ನು ಬೆಳಗಿಸಿದ ಶ್ರೀ ರಾಘವೇಂದ್ರಸ್ವಾಮಿಗಳು, ಶ್ರೀ ಚಂದ್ರಶೇಖರ ಭಾರತಿ ಸ್ವಾಮಿಗಳಂತಹ ನಕ್ಷತ್ರಗಳಿಗೆ ಕಡಿಮೆಯೇನಿಲ್ಲ.

ರಾಜಕೀಯ ಕ್ಷೇತ್ರದಲ್ಲಿ ಧರ್ಮದಲ್ಲಿ ಧರ್ಮಕ್ಕೆ ಪೂರ್ಣ ರಕ್ಷಣೆಕೊಟ್ಟ, ರಾಣಾಪ್ರತಾಪ್, ಶಿವಾಜಿ ಮುಂತಾದ ಐತಿಹಾಸಿಕ ರಾಜ-ಮಹಾರಾಜರುಗಳು ನಮ್ಮ ಯಾವಜ್ಜೀವವು ಸ್ಮರಣೆಗೆ ಯೋಗ್ಯರು, ಅಂತೆಯೆ ಬೇಲೂರು, ಹಳೇಬೀಡು, ಖಜುರಾಹೊ, ಅಜಂತ ಮುಂತಾದೆಡೆಗಳಲ್ಲಿ ಧಾರ್ಮಿಕ ಕತೆಗಳನ್ನು ಶಿಲ್ಪಕ್ಕೆ ಅಥವಾ ಚಿತ್ರಕ್ಕೆ ಇಳಿಸಿದ ಕಲಾಕಾರರು, ಧರ್ಮ ತತ್ವಗಳಿಗೆ ಕಾವ್ಯದ ಮೆರುಗನ್ನು ಕೊಟ್ಟ ಸಾಹಿತಿಗಳು ಇಂಥಾ ಅಸಂಖ್ಯಾತ ಜನರ ಕಾಣಿಕೆಯನ್ನು ವ್ಯರ್ಥಗೊಳಿಸುವುದು ನ್ಯಾಯವೇ ?

ಹೀಗೆ ಧರ್ಮೋದ್ಧಾರ ಮಾಡಲು ನಮ್ಮ ನಂಬಿಕೆಯಂತೆ ವಿಷ್ಣುವು ಹತ್ತು ಅವತಾರಗಳನ್ನು ತಾಳಿದನು. ಮಹೇಶ್ವರಾದಿಗಳಿಂದ ಅನೇಕ ಅಸುರರ ಸಂಹಾರವಾಯಿತು. ಈಗ ಇನ್ನೆಂತಹ ಅವತಾರವಾಗಬೇಕು ? ಇದು ಬಾಹ್ಯಾಕಾಶಯಾನದ ಯುಗ. ಇದುವರೆಗೂ ದೇವಾಂಶವೆಂದು ನಾವು ತಿಳಿದಿದ್ದ ಚಂದ್ರಾದಿ ಗ್ರಹಗಳ ಮೇಲೆ ಮಾನವ ಹೋಗಿ ನಿಂತು ದೇವತಾಭಾವನೆಯನ್ನು ಕಡಿಮೆ ಮಾಡಿದ್ದಾನೆ. ಧರ್ಮ ವೃಕ್ಷದ ಶಾಖೆಗಳ ಹಾಗೂ ಬಿಳಲು ಬೇರುಗಳ ಸಂಖ್ಯೆ ಮಿತಿ ಮೀರಿದೆ. ಸನಾತನ ಧರ್ಮದ ಮೂಲ ಪ್ರವಾಹದ ಭಾವನೆ ಕೆಲವರಲ್ಲಿ ಇಳಿಯುತ್ತಾ ಬಂದು, ಅವರದು ಒಂದು ಒಳಗಿನ ಧಾರ್ಮಿಕ ಪಂಥವಾಗಿದ್ದರೂ ತಮ್ಮದೇ ಬೇರೆ ಧರ್ಮವೆನ್ನಲು ಹೊರಟಿದ್ದಾರೆ. ಗುರುಪೀಠಗಳಲ್ಲಿ, ಪುಣ್ಯಕ್ಷೇತ್ರಗಳಲ್ಲಿ ಭ್ರಷ್ಟಾಚಾರಗಳ ಜೊತೆಗೆ ಬಡವರಿಗೆ ಮಾನ್ಯತೆಯೇ ಇಲ್ಲದಾಗುತ್ತಿದೆ. ಗುಡ್ಡಗಾಡಿನವರಲ್ಲಿ ಇತರ 'ಕೆಳವರ್ಗ' ದವರಲ್ಲಿ ಧಾರ್ಮಿಕ ಭಾವನೆ ಮೂಡಿಸಲು ಏನೂ ಕಾರ್ಯ ನಡೆದಿಲ್ಲ. ಮಾನವನ ಹಕ್ಕುಗಳ ಹೆಸರಿನಲ್ಲಿ ನಾಸ್ತಿಕವಾದವನ್ನೇ ಹರಡುವ ರಾಜಕೀಯ ಪಕ್ಷಗಳ ಪ್ರಭಾವವೂ ಹೆಚ್ಚಾಗುತ್ತಿದೆ. ಯುವಜನರಲ್ಲಿ ಎಲ್ಲಾ ಕ್ಷೇತ್ರಗಳಲ್ಲೂ 'ಹಿಪ್ಪಿ'ತನ ಹರಡುತ್ತಿದೆ. ಕೆಲವು ರಾಜಕಾರಣಿಗಳು ತಮ್ಮ ಹಿತರಕ್ಷಣೆಗಾಗಿ ರಾಜಕೀಯದಿಂದ ಧರ್ಮವನ್ನು ಬೇರ್ಪಡಿಸುತ್ತಿದ್ದಾರೆ. ಅಮೆರಿಕದ ತತ್ವಜ್ಞಾನಿ ಥೋರೊ ತನ್ನ ಜನಕ್ಕೆ ಅಂದಂತೆ ಇಲ್ಲಿನವರೂ ಕೆಲವರು ಹಣಕ್ಕೆ ಗುಲಾಮರಾಗುತ್ತಿದ್ದಾರೆ, ಮತಾಂತರದ ಪಿಡುಗು ಇನ್ನೂ ತಪ್ಪಿಲ್ಲ.

ಹೀಗೆ ಈಗಲಂತೂ ಸನಾತನ ಧರ್ಮ ವೃಕ್ಷಕ್ಕೆ ಭಾರೀ ಉಪದ್ರವಗಳ ಕಂತೆಯೇ ಅಂಟಿಕೊಂಡಿದೆ. ಇವುಗಳನ್ನೆಲ್ಲಾ ಪರಿಹರಿಸಲು ಶ್ರಮಿಸಿ, ವಿವಿಧ ಭಾವನೆ ಹಾಗೂ ರೀತಿನೀತಿಗಳಲ್ಲಿ ಸಾಮರಸ್ಯವನ್ನು ಕಲ್ಪಿಸುವಷ್ಟು ಶಕ್ತಿಯುಳ್ಳ ಚೇತನದ ಅವತಾರವೇ ಆಗಬೇಕಾಗಿದೆ. ಇದಕ್ಕಾಗಿ ಇದುವರೆಗಿನ ಎಲ್ಲಾ ದಿವ್ಯ ಚೇತನ ಬಲವನ್ನೆಲ್ಲಾ ಮೈಗೂಡಿಸಿಕೊಂಡೇ ಈ ಅವತಾರವಾಗಬೇಕೇನೋ !

 

# ಸೇವಾನಿಷ್ಠ ವ್ಯಕ್ತಿ ನಂಜಪ್ಪ



ಕೆ. ಎಸ್. ಶಿವರಾಜ.

ಶ್ರೀ ಶ್ರೀಗಳವರ ಶಿವಪೂಜಾ ಪರಿಕರಗಳನ್ನು ಒದಗಿಸುತ್ತಿದ್ದ ಶ್ರದ್ಧಾಭಕ್ತಿವಿಶ್ವಾಸಪೂರ್ಣ ಸೇವಕನೆನಿಸಿದ ಚಿ॥ ನಂಜಪ್ಪ ಎಂಬುವರು ಕೆಲದಿನಗಳ ಹಿಂದೆ ಲಿಂಗೈಕ್ಯರಾದರು ಅವರ ಅಪಾರಶ್ರದ್ಧೆ ಕರ್ತವ್ಯಕೌಶಲಗಳು ಶ್ರೀ ಕ್ಷೇತ್ರದ ಎಲ್ಲರ ಮೆಚ್ಚುಗೆಗೆ ಪಾತ್ರವಾಗಿದ್ದವು. ಅವರ ಬಗೆಗೆ ಶ್ರೀ ಶಿವರಾಜ ಅವರು ಅನೇಕ ಮಾಹಿತಿ ಒದಗಿಸಿದ್ದಾರೆ, ಅವರಿಗೆ ಧನ್ಯವಾದಗಳು.

—ಸಂ—



ಹಾಸನ ಜಿಲ್ಲಾ ಆಲೂರು ತಾಲ್ಲೂಕಿನಲ್ಲಿ ನಿಡುಗರ ಹಳ್ಳಿ ಒಂದು ಸಣ್ಣ ಗ್ರಾಮ. ಸಂದರ್ಶಕರಿಗೆ ಸೌಂದರ್ಯದ ರಸದೌತಣ ನೀಡುವ ಮಲೆನಾಡ ನಿಸರ್ಗದ ಮಡಿಲಲ್ಲಿ ಹಾಯಾಗಿ ಮಲಗಿರುವ ಹಸುಗೂಸಿನಂತಿದೆ ಈ ಹಳ್ಳಿ. ಸುತ್ತಲೂ ಗಿಡ ಮರಗಳ ಗುಂಪು. ಮರಗಳ ಮಧ್ಯೆಯೇ ಮನೆಗಳು. ಗಗನವನ್ನೆಟಕಿಸುವ ಉತ್ಕಟೋಚ್ಛ್ರಯುಳ್ಳ ಮರಗಳು ಮನೆಗಳನ್ನು ಮುಚ್ಚಿಕೊಂಡಿವೆ. ಇಲ್ಲಿ ಸಿದ್ದೇಗೌಡರದು ಒಂದು ಬಡ ಕುಟುಂಬ. ಹಣಕ್ಕೆ ಕೊರತೆ ಇತ್ತೇ ಹೊರತು ಗುಣ ಮಾತ್ರ ತಾಂಡವ ಮಾಡುತ್ತಿತ್ತು. ಅದು ಒಳ್ಳೆಯ ಗುಣಗಳ ತವರಾಗಿತ್ತೆಂದರೆ ಅತಿಶಯೋಕ್ತಿಯಲ್ಲ. ನೋಡಲು ಸಣ್ಣಮನೆ ಆದರೂ ಗಳಿಸಿತ್ತು ಅಪಾರ ಯಶಸ್ಸು. ಕುಟುಂಬದ ನಡತೆ ಹಳ್ಳಿಯ ಎಲ್ಲರ ಮೆಚ್ಚುಗೆಯನ್ನು ಪಡೆದಿತ್ತು. ಕುಟುಂಬದ ಗೃಹಿಣಿ ಗಂಗಮ್ಮ, ಭಕ್ತಿಯ ನಿಧಿ ಅವರಾಗಿದ್ದರು. ಸರಳ ಜೀವಿಯಾದರೂ ಬಹು ಸುಂದರಿ. ಆಕೆಯ ವ್ಯವಹಾರವೆಲ್ಲವೂ ಬಹು ಅಚ್ಚುಕಟ್ಟು. ಮಂಗಳ ಮುಹೂರ್ತವೊಂದರಲ್ಲಿ ಒಂದು ಗಂಡು ಶಿಶುವಿಗೆ ಜನ್ಮವಿತ್ತರು. ಮಗು ಮುದ್ದಾಗಿತ್ತು. 'ನಾಗರಾಜ' ಎಂದು ನಾಮಕರಣವಾಯಿತು. ಮಗುವು ಮೃಷ್ಟಾನ್ನ ಸವಿಯುವ ಸೌಭಾಗ್ಯ ಪಡೆದಿಲ್ಲದಿದ್ದರೂ ತಾಯ ವಾತ್ಸಲ್ಯದ ಕೈತುತ್ತು ಉಣ್ಣುವ ಮಹಾ ಭಾಗ್ಯ ತನ್ನದಾಗಿತ್ತು. ಅಂತೆಯೇ ಧೃಡಕಾಯವಾಗಿ ಬೆಳೆಯಿತು. ವಿಧಿಯ ವಿಲಾಸ ಬಲ್ಲವರು ಯಾರು ? ಅಸೂಯೆಯಿಂದಲೋ, ಅತಿ ಆಸೆಯಿಂದಲೋ, ಮತ್ತಿನ್ನಾವ ಮಹಾ ಸಾಧನೆಗೋ ವಿಧಿಯು ತನ್ನ ಕ್ರೂರದೃಷ್ಟಿಯನ್ನು ಬೀರಿತು. ಬರಸಿಡಿಲು ಬಡಿಯಿತು. ತಾಯಿ ಗಂಗಮ್ಮ ಸಾವನ್ನಪ್ಪಿದಳು. ಅಂದಿನಿಂದ ತಂದೆಯೇ ತಾಯಿಯೂ ಆಗಿ ಸಾಕಿ ಸಲಹಿದನು. ಬಾಲ್ಯದಲ್ಲಿ ಕಷ್ಟ ಜೀವಿಯಾದ ಹುಡುಗನಿಗೆ ದುಡಿಮೆಯೇ ಒಂದು ವರ ಪ್ರಸಾದವಾಯ್ತು.

ಐಗೂರು ಎಸ್ಟೇಟ್ ಮಾಲೀಕರು ರಾಜಶೇಖರ್‌ರವರು. ದೈವಭಕ್ತಿಪರರು. ಧರ್ಮಶ್ರದ್ಧೆಯುಳ್ಳವರು. ಶ್ರೀ ಸಿದ್ಧಗಂಗಾಮಠದ ಭಕ್ತರು. ಅಂದು ಅವರ ಮನೆಯಲ್ಲಿ ವಿಶೇಷ ಪೂಜಾ ಕಾರ್ಯಕ್ರಮ. ಭಕ್ತ ಪರಾಧೀನರಾದ, ಸಿದ್ಧಗಂಗಾ ಮಠಾಧೀಶರಾದ ಶ್ರೀ ನಿ॥ ಪ್ರ॥ ಸ್ವ॥ **ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು** ಇವರ ಬಿನ್ನಹವನ್ನೊಪ್ಪಿ ಆಗಮಿಸಲು ಒಪ್ಪಿರುವುದು ಅವರ ಸಂತಸವನ್ನು ನೂರ್ಮಡಿಗೊಳಿಸಿದೆ. ಸಂಭ್ರಮ ಹೇಳತೀರದು. ಎಂದೂ ಇಲ್ಲದ ಸಡಗರ. ಆಯಾ ವಿಭಾಗಗಳಲ್ಲಿ ಪರಿಣತ ಕೆಲಸಗಾರರನ್ನು ಬರಮಾಡಿಕೊಳ್ಳಲಾಗಿದೆ. ವಿಶೇಷ ವ್ಯವಸ್ಥೆ ನಡೆದಿದೆ. ಶಿವಪೂಜಾಗೃಹ ಸಂಬಂಧ ವ್ಯವಸ್ಥೆ ಅಡಿಗೆ ಏರ್ಪಾಡುಗಳಿಗೆ ಕರೆಸಿದ್ದವರಲ್ಲಿ ನಾಗ

ರಾಜುವೂ ಒಬ್ಬ. ಗುಂಪಿನಲ್ಲಿ ಒಳ್ಳೆಯ ವಯಸ್ಸಿನವನು ಎಲ್ಲೆಲ್ಲೂ ಅವನದೇ ಓಡಾಟ. ಅವನ ಕುಶಲತೆ, ಕಾರ್ಯ ನಿಷ್ಠೆಗಳನ್ನು ಸೂಕ್ಷ್ಮವಾಗಿ ಗಮನಿಸಿ, ಅವನ ವರ್ಚಸ್ಸನ್ನು ಅರಿತ ಶ್ರೀ ಶ್ರೀಗಳವರು ಅವನ ಪೂರ್ಣ ಪರಿಚಯ ಪಡೆದರು. ಪ್ರತಿಭೆಗೆ ಸ್ಥಾನ ಕೊಡುವುದು ಶ್ರೀಗಳವರ ಸ್ವಭಾವ. ನಡೆ ನುಡಿಗಳನ್ನು ಮೆಚ್ಚುವುದು ಅವರ ವೈಶಿಷ್ಟ್ಯ. ಆತನಿಗೆ ಆಶ್ರಯದಾನ ಮಾಡಿದರು, ಶ್ರೀಮಠದಲ್ಲಿ ಶಿವಪೂಜಾ ಸಿದ್ಧತೆಗಾಗಿ ನಿಯೋಗಿಸಿದರು. ಹುದುಗಿದ್ದ ಪ್ರತಿಭೆಗೆ ಅರಳಿ ಸುವಾಸನೆ ಬೀರಲು ಸದವಕಾಶ ಕಲ್ಪಿಸಿದರು.

ಏಳು ವರ್ಷಗಳು ಸಂದವು. ಸದಾ ಹಸನ್ಮುಖಿ, ನೋಳ್ಪರ ಕಂಗಳಿಗೆ ಸಂತಸ ನೀಡುವ ಸೂರ್ಯಪ್ರಭೆ ಅವನಲ್ಲಿತ್ತು. 'ನಾಗರಾಜ' ಹೆಸರು ಚೆಂದವೇ ಇತ್ತು. ಆದರೂ ಪ್ರೀತಿನಾಮ "ನಂಜಪ್ಪ" ಎಂಬುದೇ ರೂಢಿಗೆ ಬಂತು. ಓದು ಬರಹ ಬಂದರೂ ಏನೂ ಅರಿಯದ ಮುಗ್ಧ, ಅಹಂಭಾವದ ಅರಿವೇ ಇಲ್ಲ. ತೋರಿಕೆ ತಳುಕುಗಳು ಅವನ ಹತ್ತಿರ ಸುಳಿಯಲಿಲ್ಲ. ಮಗುವಿನ ಸ್ವಭಾವ. ಸೇವೆಯೊಂದೇ ಅವನ ಗುರಿ. ಪೂಜ್ಯರ ಪೂಜೆಗೆ ಅಣಿಮಾಡುವುದು, ಶ್ರೀಗಳ ಅಡಿಗೆ ತಯಾರಿಸಿ ಉಣಬಡಿಸುವುದು– ಈ ಪುಣ್ಯ ಕಾಯಕಗಳು ಅವನ ಪಾಲಿಗೆ ಬಂದವು. ಪವಿತ್ರ ಕಾರ್ಯಗಳ ಪಾವಿತ್ರ್ಯವನ್ನು ಕಾಪಾಡಿಕೊಂಡು ಬಂದುದೆ ಅವನ ಚಾರಿತ್ರ್ಯ. ಕರ್ತವ್ಯ ನಿರ್ವಹಣೆಯ ಹಿರಿಮೆಗೆ ಅವನೊಂದು ನಿದರ್ಶನ. ಸೇವೆಗಾಗಿ ಸರ್ವವನ್ನೂ ತ್ಯಜಿಸಿದ ಮಹಾ ತ್ಯಾಗಿ, ಸ್ವಶರೀರ ಬಾಧೆಗಳನ್ನು ಲೆಕ್ಕಿಸದೆ ದುಡಿದ ಶ್ರಮಜೀವಿ. ಒಮ್ಮೆ ಪೂಜಾ ಸಮಯ, ಹೂ ಕೊಯ್ಯಲು ಹೋದಾಗ ಕೈ ಬೆರಳೊಂದರ ತುದಿಗೆ ನೋವಾಯ್ತು. ಹಾವು ಕಡಿದ ಅನುಭವವಾಯ್ತು. ಸಂಶಯ ಬಲವಾದಾಗ, ಅನುಮಾನ ಖಚಿತವಾಯ್ತು. ಆದರೂ ಪೂಜೆಗೆ ವಿಲಂಬ ಮಾಡಲುಂಟೆ ! ಭಂಗ ಬರುವುದುಂಟೇ ! ಬ್ಲೇಡೊಂದರಿಂದ ಬೆರಳ ತುದಿಯನೆರೆದು ಪೂಜೆಗೆ ಅಣಿಮಾಡಿದ ಕೀರ್ತಿಗೆ ಭಾಗಿಯಾದನೀತ. ಎಷ್ಟೇ ಕೆಲಸವಿರಲಿ, ಎಲ್ಲವೂ ಸುಲಲಿತ. ಬೇಸರ ಆಲಸ್ಯಗಳ ಸುಳಿವಿಲ್ಲ. ಅರೆಕ್ಷಣದಲ್ಲಿಯೇ ಅಗಾಧ ಕೆಲಸಗಳನ್ನು ಮಾಡಿ ಮುಗಿಸುವ ಚಾಕಚಕ್ಯತೆ ಇವನದಾಗಿತ್ತು. ಅಡುಗೆಯಲ್ಲಿ ನಿಪುಣ. ಪಾಕಶಾಸ್ತ್ರದಲ್ಲಿ ಅನಭಿಷಿಕ್ತ ಪಾರಂಗತ. ಆತುರವಾದರೂ ಎಲ್ಲವೂ ಅಚ್ಚುಕಟ್ಟು. ಅದು ಅವನ ಕೈಗುಣ. ಭಕ್ತರ ಬಿನ್ನಹಗಳನ್ನೊಪ್ಪಿ ಶ್ರೀಶ್ರೀಗಳವರು ಬಿಜಯ ಮಾಡಿದಾಗ ಹೊಸ ವಾತಾವರಣಕ್ಕೆ ಬಹು ಬೇಗ ಹೊಂದಿಕೊಂಡು ಶೀಘ್ರ ಏರ್ಪಾಡು ಮಾಡುವುದು ಸಾಮಾನ್ಯದ ಕೆಲಸವಲ್ಲವಾದೂ ಸಾಧಿಸಿದ ಯಶಸ್ಸು ಆತ ಪಡೆದಾತ. ನಿತ್ಯ ನೂರಾರು ಮಂದಿ ಶ್ರೀಶ್ರೀಗಳವರ ಪೂಜಾ ಸಮಯಕ್ಕೆ ಆಗಮಿಸಿ ಪಾದಪೂಜೆ ಮಾಡಿ ಪ್ರಸಾದ ಸ್ವೀಕರಿಸುತ್ತಾರೆ. ಮಠಾಧಿಪತಿಗಳು, ಸಾಧುಗಳು, ಸಂತರು ನಿತ್ಯ ಬರುತ್ತಲೇ ಇರುತ್ತಾರೆ. ಎಲ್ಲರಿಗೂ ಪೂಜೆಯ ವ್ಯವಸ್ಥೆ, ಪ್ರಸಾದ ವಿನಿಯೋಗ, ಅವರ ಯೋಗಕ್ಷೇಮ ವಿಚಾರಣೆ ಚಾಚೂ ತಪ್ಪದೆ ಮಾಡಿದ್ದು ಮಾತ್ರವಲ್ಲದೆ ಅವರ ಮೆಚ್ಚುಗೆಯನ್ನೂ ಪಡೆದನು. ತನ್ನ ಹೆಸರನ್ನು ಅವರ ಮನದಲ್ಲಿ ನಿಲ್ಲಿಸಿದನು. ನಾ ಮಾಡಿದ ಅಡುಗೆ ನನಗಾಗಿ ಸ್ವಲ್ಪವಾದರೂ ಉಳಿಯಲಿ ಎಂದು ಅಪ್ಪಿ ತಪ್ಪಿಯೂ ಎಂದೂ ಭಾವಿಸಿದವನಲ್ಲ. ಶುಚಿಯು ಅವನ ಕೆಲಸದ ಸಂಕೇತ. ಸ್ವಚ್ಛತೆಗೆ ಆದ್ಯ ಗಮನ. ಈತನ ಸೇವಾನಿಷ್ಠೆಯನ್ನು ಎಷ್ಟು ಬಣ್ಣಿಸಿದರೂ ಅಲ್ಪವೇ ಆದರೂ ತನ್ನ ಸ್ಥಾನಮಾನಗಳ ಅಂಕೆಯನ್ನೂ ಮೀರಿದ ವ್ಯಕ್ತಿಯೇ ಅಲ್ಲ.

ಇದೇ 1971ರ ಜುಲೈ 12ನೇ ಸೋಮವಾರ ಬೆಳಗಿನಜಾವ ಘಂಟೆ ಮೂರು, ಪ್ರತಿ ದಿನದಂತೆ ಶ್ರೀಗಳವರು ಪೂಜಾ ಗೃಹ ಪ್ರವೇಶ ಮಾಡಿದರು. ಎಲ್ಲವೂ ಅಣಿಯಾಗಿತ್ತು. ಅಭ್ಯಾಸದಂತೆ ಅಗ್ಗಿಷ್ಟಿಕೆಗೆ ಬೆಂಕಿ ಸರಿಮಾಡಿಟ್ಟು ನಮಸ್ಕರಿಸಿ ಬಂದು ಪೂಜೆಗೆ ಹೂ ಕೊಯ್ಯಲು ಹೊರಟಾಗ ಘಂಟೆ ನಾಲ್ಕು. ಪೂಜಾಮಂದಿರದ ಪಕ್ಕದಲ್ಲಿಯೇ ಬಿಡುವಿನ ವೇಳೆಯಲ್ಲಿ ಬೆವರು ಸುರಿಸಿ ತಾನೇ ಬೆಳೆಸಿದ್ದ ಸೊಗಸಾದ ಹೂದೋಟ, ಅವುಗಳ ಜೊತೆ ಏಳು ವರ್ಷಗಳಿಂದ ಈತನ ಎಡೆಬಿಡದ ನಂಟು. ಹೂ ಗಿಡಗಳ ಮಧ್ಯೆ ಬೆಳೆದು ನಿಂತಿರುವ ಸಂಪಿಗೆ ಮರ ತನ್ನ ನೀಳವಾದ ಕೈಗಳನ್ನು ಮಂದಿರದ ಮೇಲೂ ಚಾಚಿ ನಿಂತಿದೆ. ಸಂಪಿಗೆಯ ಸುವಾಸನೆ ಕೈ ಬೀಸಿ ಕರೆಯಿತು. ಗಾಢವಾದ ಕತ್ತಲು ಒಂದು

ಕೈಯ್ಯಲ್ಲಿ ಬ್ಯಾಟರಿ, ಅದೇ ಕೈಯ್ಯಲ್ಲಿ ಹೂವಿನ ಬುಟ್ಟಿ, ಇನ್ನೊಂದು ಕೈ ಮರ ಹತ್ತುವ ಕಾಲುಗಳಿಗೆ ಸಹಾಯ ಮಾಡುತ್ತಿದೆ ತುದಿಯವರೆಗೂ ಬಂದುದಾಯ್ತು. ಅರಳಿ ನಿಂತು ನಗುತ್ತಿರುವ ಸಂಪಿಗೆಗೆ ಎಟುಕಿಸಿ ಕೈ ನೀಡಿದ ನಂಜಪ್ಪ ತಾನು ನಿಂತಿದ್ದ ಕೊಂಬೆ ಮುರಿದುದು ಗಮನಿಸಲಿಲ್ಲ. ಮಂದಿರದ ಗೋಡೆಯ ಮೇಲೆ ಬಿದ್ದ ಪುಟನೆಗೆದು ಭೂತಾಯಿಯನ್ನಪ್ಪಿದ. ಜ್ಞಾನ ತಪ್ಪಿತು. ರಕ್ತ ಧಾರಾಕಾರವಾಗಿ ಹರಿಯಿತು, ಸಹಿಸಲಾರದ ನೋವುಂಟಾಯಿತು. ರೋಧನ ಪ್ರಾರಂಭವಾಯಿತು, ಕ್ಷೀಣ ಧ್ವನಿಯಾದರೂ ಶಾಂತ ವಾತಾವರಣವನ್ನು ಕದಡಿತು. ಪೂಜ್ಯ ಪಾದರು ಪೂಜಾ ಪರವಶತೆಯಿಂದ ಬಹಿರ್ಮುಖಗೊಂಡರು, ವಿಧಿಯ ವಿಲಾಸವನ್ನು ನೋಡಿ ಮರುಗಿದರು. ಆತನ ದುರವಸ್ಥೆ ಶ್ರೀಗಳವರಿಗೂ ದುಃಖ ತಂದಿತು. ತಕ್ಷಣವೇ ತುಮಕೂರು ಆಸ್ಪತ್ರೆಗೆ ದಾಖಲ್ಮಾಡಲಾಯಿತು. ನುರಿತ ವೈದ್ಯರು ಉತ್ತಮ ವೈದ್ಯಕೀಯ ಉಪಚಾರ ನೀಡಿದರೂ ಪ್ರಯೋಜನವಾಗಲಿಲ್ಲ. ವಿಧಿಯ ಬರೆಹವನಳಿಸಲು ಹರಿಹರವಿರಿಂಚಿಗಳಿಗೂ ಸಾಧ್ಯವಿಲ್ಲ ! ಪಾಮರರ ಪಾಡೇನು ? 1971 ನೇ ಜುಲೈ 13, ಮಂಗಳವಾರದಂದು ಬೆಳಗ್ಗೆ ಸುಮಾರು 9 - 30 ಘಂಟೆಗೆ ನಂಜಪ್ಪ ಶಿವಸಾಯುಜ್ಯವನ್ನೈದಿದನು. ಶ್ರೀಮಠದ ಪರಿಚಯವುಳ್ಳ ಎಲ್ಲರಿಗೂ ಮಿಂಚಿನಂತೆ ಹರಡಿತು ಸುದ್ದಿ. ಅನೇಕ ಕಡೆಗಳಿಂದ ಸಂತಾಪ ಸೂಚಕ ಪತ್ರಗಳು ಬಂದುವು. ಶ್ರೀಮಠದ ಮೂರು ಸಾವಿರ ಮಕ್ಕಳ ಆರು ಸಾವಿರ ಕಣ್ಣುಗಳ ಜೊತೆಗೆ ಹಿತೈಷಿಗಳು, ಭಕ್ತಾದಿಗಳು ಸಹಸ್ರಾರು ಮಂದಿ ಸೇರಿ ಕಂಬನಿಮಿಡಿದರು. ಪೂಜ್ಯ ಪಾದರ ದಿವ್ಯ ಸಮಕ್ಷದಲ್ಲಿ ಸಮಾಧಿ ಮಾಡಲಾಯಿತು. ಇದೇ ಜುಲೈ 25ನೇ ಶನಿವಾರದಂದು ಈ ಸಂಬಂಧವಾದ ಶಿವಗಣಾರಾಧನೆಯನ್ನು ವಿಜೃಂಭಣೆಯಿಂದ ಆಚರಿಸಲಾಯಿತು. ಅನೇಕ ಮಂದಿ ಮಠಾಧೀಶರುಗಳೂ, ಹರಗುರು ಚರಮೂರ್ತಿಗಳೂ, ಶ್ರೀಮಠದ ಭಕ್ತಾದಿಗಳೂ ಆಗಮಿಸಿದ್ದರು. ಶ್ರೀಮಠದ ಮಕ್ಕಳು, ಸಿಬ್ಬಂದಿ ವರ್ಗದವರೂ ಭಾಗವಹಿಸಿದ್ದರು. ಎಲ್ಲರ ಬಾಯಲ್ಲಿಯೂ ನಂಜಪ್ಪನದೇ ಮಾತು. ಇದೇ ಸಂದರ್ಭದಲ್ಲಿ ಆತನ ಭಾವ ಚಿತ್ರವನ್ನು ಅನಾವರಣ ಮಾಡಿದ ಪೂಜ್ಯ ಶ್ರೀಗಳವರು ಅವನ ಸೇವಾನಿಷ್ಠೆಯನ್ನೂ ಅವನ ಶರೀರ ಧಾರ್ಢ್ಯತೆಯನ್ನೂ ಶ್ಲಾಘಿಸಿದರು. ಶ್ರೀಮಠಕ್ಕೆ ದಯಮಾಡಿಸುತ್ತಿದ್ದ ಎಲ್ಲಾ ಮಠಾಧೀಶರುಗಳ ಮನಸ್ಸನ್ನು ತನ್ನ ಸೇವೆಯಿಂದ ಸೂರೆಗೊಂಡಿದ್ದನೆಂದು ಶ್ರೀಕಲ್ಲು ಮಠದ ಶ್ರೀಗಳವರು ಅಭಿಪ್ರಾಯಪಟ್ಟುದು ಅಕ್ಷರಶಃ ನಿಜ. 'ಶ್ರೀಮಠದಲ್ಲಿ ನಿಷ್ಠಾಪೂರ್ವಕ ಸೇವೆ ಸಲ್ಲಿಸಿ ಮಹಾತ್ಮರಾದ ಶ್ರೀ ಸಿದ್ಧಲಿಂಗೇಶ್ವರರಿಗೆ ಅರ್ಪಿತವಾದ ಹಲವೇ ಪುಷ್ಪಗಳಲ್ಲಿ ಇದು ಒಂದು" ಎಂದು ನುಡಿದ ಶ್ರೀ ಹೊನ್ನಮ್ಮಗವಿ ಮಠದ ಶ್ರೀಗಳವರ ಮಾತು ಸತ್ಯವಲ್ಲದೆ ಮತ್ತೇನು ? ಮೃತನ ತಂದೆಯವರು ಸಿದ್ಧಲಿಂಗೇಶ್ವರನ ಕೃಪೆಯಿಂದ ತನ್ನ ಮುದ್ದು ಮಗನ ನಿಧನದಿಂದಾಗಿ ಉಂಟಾಗಿರುವ ಅತುಲವಾದ ದುಃಖವನ್ನು ಸಹಿಸಿಕೊಂಡು ಸನ್ನಿಧಾನದಲ್ಲಿ ಸಂತಸದಿಂದಿರುವುದು ನಮಗೆಲ್ಲರಿಗೂ ಹರ್ಷ. ಪ್ರಬುದ್ಧವಾದಂಥ ಶಕ್ತಿ ಇರದಿದ್ದರೂ ಮಗನ ನಿಧನ ಭಗವಂತನಿಗರ್ಪಿತವಾಯ್ತೆಂಬ ಭಾವನೆ ಅವರಿಗಿರುವುದು ನಮಗೆ ಸಮಾಧಾನ. ದಿವಂಗತನ ಆತ್ಮಕ್ಕೆ ಚಿರಶಾಂತಿಯನ್ನು ಕರುಣಿಸಲೆಂದು ಸರ್ವಶಕ್ತ ಭಗವಂತನನ್ನು ನಾವೆಲ್ಲರೂ ಭಕ್ತಿಯಿಂದ ಪ್ರಾರ್ಥಿಸೋಣ.

—O—

ದ್ವೇಷ ಅಸೂಯೆಗಳನ್ನು ನೀವು ಹೊರಚಾಚಿದರೆ ಅವು ನಿಮ್ಮ ಮೇಲೆ ಚಕ್ರಬಡ್ಡಿ ಸಮೇತ ಪ್ರತಿಪುಟಿಯುತ್ತವೆ. ಯಾವ ಶಕ್ತಿಯೂ ಅವನ್ನು ನಿವಾರಿಸಲಾರದು. ಒಮ್ಮೆ ಅವನ್ನು ನೀವು ಚಲನೆಗೆ ತೊಡಗಿಸಿದರೆ, ನೀವು ಅವನ್ನು ಸಹಿಸಿಯೇ ತೀರಬೇಕಾಗುತ್ತದೆ. ಇದರ ಸ್ಮರಣೆ ನೀವು ದುಷ್ಕೃತ್ಯಗಳನ್ನು ಮಾಡುವುದನ್ನು ತಪ್ಪಿಸುತ್ತದೆ.

**ಸ್ವಾಮಿ ವಿವೇಕಾನಂದರು.**

# ಜ್ಯೋತಿಷಿಯ ಮಗ

## (ಒಂದು ಜಾನಪದ ಕಥೆ)

—ಎಸ್. ಬಸವಾರಾಧ್ಯ ಎಂ. ಎ. ಸಂಪಾದಕರು ಕನ್ನಡ ನಿಘಂಟು ಬೆಂಗಳೂರು

"ಜನ್ಮಪ್ರಭೃತಿ ದಾರಿದ್ರ್ಯಂ । ದಶವರ್ಷಾಣಿ ಬಂಧನಂ
ಸಮುದ್ರತೀರೇ ಮರಣಂ । ಕಿಂಚಿತ್ ಭೋಗಂ
ಭವಿಷ್ಯತಿ''.

"ಹುಟ್ಟಿನಿಂದ ಬಡತನ; ಹತ್ತು ವರ್ಷ ಜೈಲು
ಸಮುದ್ರ ತೀರದಲ್ಲಿ ಸಾವು; ಅಲ್ಪಭೋಗ ಸಂಪ್ರಾಪ್ತಿ"

ಗಂಗಾಧರ ತುಂಬಾ ಅದೃಷ್ಟಹೀನ. ಅವನ ತಂದೆ ಮಹಾ ಜ್ಯೋತಿಷಿ. ಆತ ಸಾಯುವ ಸಮಯದಲ್ಲಿ ಮಗನ ಕಿವಿಯಲ್ಲಿ ಮೇಲೆ ಹೇಳಿದಂತೆ ಉಸುರಿ ಕಣ್ಣು ಮುಚ್ಚಿದ್ದ. ಅದೇನಂತೆ ಗಂಗಾಧರನ ಪಡೆಬರಹ! ಅವನನ್ನು ಸದಾ ಕೊರೆಯುತ್ತಿದ್ದುದು ಇದೇ ಯೋಜನೆ "ಅಯ್ಯೋ, ಇಷ್ಟು ಮಾತ್ರಕ್ಕೆ ಈ ಭೂಮಿಯ ಮೇಲೆ ನಾನೇಕೆ ಜನಿಸಬೇಕಾಗಿತ್ತು? ನನ್ನ ತಂದೆ ಹೇಳಿದ ಭವಿಷ್ಯ ಎಂದಿಗೂ ಸುಳ್ಳಾಗದು. ಅವರು ಹೇಳಿದುದೆಲ್ಲ ಅಕ್ಷರಶಃ ಸತ್ಯವೆಂಬುದನ್ನು ನಾನು ಕಣ್ಣಾರೆ ಕಂಡಿದ್ದೇನೆ. ಹುಟ್ಟಿದಾರಭ್ಯ ದಾರಿದ್ರ್ಯ; ಈ ದಾರಿದ್ರ್ಯದ ಜೊತೆಗೆ ಹತ್ತು ವರ್ಷ ಬಂಧನ ಬೇರೆ. ಬಂಧನ, ದಾರಿದ್ರ್ಯಕ್ಕಿಂತಲೂ ಕಷ್ಟತರ. ಈ ದಾರಿದ್ರ್ಯ ಬಂಧನಗಳಾದ ಮೇಲೆ ಸಮುದ್ರ ತೀರದಲ್ಲಿ ಮರಣ. ನೆಂಟರಿಷ್ಟರನ್ನೂ, ಮನೆ ಮಠಗಳನ್ನೂ ಬಿಟ್ಟು ಸಮುದ್ರ ತೀರದಲ್ಲಿ ಮರಣ ಹೊಂದಬೇಕು. ಇದೇ ನನ್ನ ಜೀವನ, ದುರ್ಗತಿಯ ಪರಮಾವಧಿ. ಕೊನೆಯಲ್ಲಿ ಬರೆದಿರುವ "ಅಲ್ಪಸ್ವಲ್ಪ ಭೋಗಪ್ರಾಪ್ತಿ" ಯಂತೂ ನಗೆಗೇಡೇ ಸರಿ. ಏಕೆಂದರೆ ಮೊದಲು ಮರಣ, ತರುವಾಯ ಅಲ್ಪ ಸ್ವಲ್ಪ ಭೋಗ. ಅದು ಸಾಧ್ಯವಾಗುವುದಾದರೂ ಹೇಗೆ? ಅದೇನು ಇಹ ಭೋಗವೋ ಪರಲೋಕದ ಭೋಗವೋ, ಬಲ್ಲವರಾರು? ನನ್ನ ತಂದೆ ಜಾತಕದ ಮೊದಲಲ್ಲಿ ಕಷ್ಟ ಪರಂಪರೆಯನ್ನೇ ಸೃಷ್ಟಿಸಿ, ಕೊನೆಯಲ್ಲಿ ಆ ಕಷ್ಟಗಳ ಶಮನಾರ್ಥವಾಗಿ "ಅಲ್ಪಸ್ವಲ್ಪ ಭೋಗ ಪ್ರಾಪ್ತಿ" ಎಂದು ಬರೆದಿರಬಹುದಲ್ಲವೆ? ತಂದೆ ಬರೆದ ಜಾತಕ ಮೂರು ಭಾಗವಂತೂ ಸತ್ಯ. ಕೊನೆಯ ಭಾಗ ಪ್ರಾಯಶಃ ತನ್ನ ಸಮಾಧಾನಕ್ಕಾಗಿ ಬರೆದಿರಬಹುದು. ಆದ್ದರಿಂದ ನಾನು ಕೂಡಲೆ ಕಾಶೀ ಕ್ಷೇತ್ರಕ್ಕೆ ಹೋಗಿ ಗಂಗೆಯಲ್ಲಿ ಮಿಂದು ನನ್ನ ಪಾಪಗಳನ್ನು ನೀಗಿಕೊಂಡು ಮರಣಕ್ಕೆ ಸಿದ್ಧನಾಗಬೇಕು. ಸಮುದ್ರ ತೀರವನ್ನು ಬಿಟ್ಟು ಭೂ ಮಾರ್ಗವಾಗಿಯೇ ಪ್ರಯಾಣ ಮಾಡಬೇಕು. ಏಕೆಂದರೆ ತಂದೆಯ ಮಾತಿನಂತೆ ಸಮುದ್ರತೀರದಲ್ಲಿ ತಾನೇ ಮರಣ. ಈಗಲಾದರೂ ಹತ್ತು ವರ್ಷ ಬಂಧನಕ್ಕೆ ಬೇರೆ ಸಿದ್ಧನಾಗಬೇಕು. ಮೊದಲು ಬಂಧನ ಲಭಿಸಲಿ."

ಈ ರೀತಿ ನಿರ್ಧರಿಸಿ ಚಿರಿಯಣ್ಣನನ್ನು ಬೀಳ್ಕೊಂಡು ಗಂಗಾಧರ ಕಾಶೀ ಕ್ಷೇತ್ರಕ್ಕೆ ಪ್ರಯಾಣ ಬೆಳೆಸಿದನು. ಸಮುದ್ರತೀರ ಬಿಟ್ಟು ದಖನ್ ಪ್ರಸ್ಥಭೂಮಿ ಮಾರ್ಗವಾಗಿ ಹೊರಟು, ಅನೇಕ ವಾರ, ತಿಂಗಳು ದಾರಿ ನಡೆದು ವಿಂಧ್ಯ ಪರ್ವತವನ್ನು ಸೇರಿದನು. ಅದನ್ನು ದಾಟುವಾಗ ಕೆಲವು ದಿನ ಅನ್ನನೀರಿಲ್ಲದಂತಾಯಿತು. ಅವನಲ್ಲಿದ್ದ ಆಹಾರ ಸಾಮಗ್ರಿಗಳೆಲ್ಲಾ ಮುಗಿದು ಕುಡಿಯುವ ನೀರಿನ ಚೆಂಬೂ ಬರಿದಾತಾಯಿತು. ಕೊನೆಗೆ ತಿನ್ನುವುದಕ್ಕೊಂದು ತುಣುಕಾಗಲಿ, ಕುಡಿಯುವುದಕ್ಕೆ ಒಂದು ತೊಟ್ಟು ನೀರಾಗಲಿ ಇಲ್ಲವಾಯಿತು. ಎತ್ತ ನೋಡಿದರೂ ಮರಳು ಕಾಡೇ ಕಾಣುತ್ತಿತ್ತು. ಅದರಿಂದ ತಪ್ಪಿಸಿಕೊಳ್ಳಲು ಬೇರೆ ಮಾರ್ಗವೇ ಕಾಣಲಿಲ್ಲ. ಆಗ ಅವನಿಗೆ ತಂದೆ ಬರೆದಿಟ್ಟಿದ್ದ ಜಾತಕ ನೆನಪಾಯಿತು. ಈ ಕಷ್ಟಗಳೊಂದಿಗೆ ಎಲ್ಲೋ ಕಡಲ ದಂಡೆಯಲ್ಲಿ ತನಗೆ ಮರಣವೂ ಸಿದ್ಧವಾಗಿರಬಹುದೆಂದು ನಿರ್ಧರಿಸಿದನು. ಈ ನಿರ್ಧಾರದಿಂದ ನವಚೇತನ ಹೊಂದಿ ಬೇಗ ಬೇಗ ಕಾಲು ಹಾಕಿದನು. ಕಟ್ಟಕಡೆಗೆ ಅವನಿಗೊಂದು ಹಾಳುಭಾವಿ ಕಾಣಿಸಿತು. ನೀರು ಸೇದಲು ಹಗ್ಗವನ್ನು ಬಿಗಿದು ಚೆಂಬನ್ನು ಭಾವಿಯೊಳಕ್ಕೆ

ಬಿಟ್ಟನು. ಆ ಜೊಂಬು ಭಾವಿಯೊಳಗೆ ಒಂದು ಗೊತ್ತಾದ ಆಳದಲ್ಲಿ ನಿಂತುಬಿಟ್ಟಿತು. ಒಳಗಿನಿಂದ ಈ ಮಾತುಗಳು ಹೊರಬಿದ್ದವು. "ಅಯ್ಯೋ ನನ್ನನ್ನು ಹೊರತೆಗೆಯಿರಿ. ಹುಲಿಗಳ ರಾಜ. ಹಸಿವಿನಿಂದ ಸಾಯುತ್ತಿದ್ದೇನೆ. ಕಳೆದ ಮೂರು ದಿನಗಳಿಂದ ಆಹಾರವಿಲ್ಲ. ದೈವವೇ ನಿಮ್ಮನ್ನಿಲ್ಲಿಗೆ ಕಳುಹಿಸಿದಂತಿದೆ. ನನಗೀಗ ನೆರವಾದರೆ ಸಾಯುವತನಕ ನಿಮಗೆ ನನ್ನ ಕೈಲಾದ ಸಹಾಯ ಮಾಡುತ್ತೇನೆ. ನಾನು ಮನುಷ್ಯರನ್ನು ತಿನ್ನುವ ಮೃಗವಲ್ಲ. ನಿಮ್ಮನ್ನು ಎಂದಿಗೂ ಮುಟ್ಟುವುದಿಲ್ಲ. ದಯವಿಟ್ಟು ನನ್ನನ್ನು ಹೊರಕ್ಕೆ ತೆಗೆಯಿರಿ." ಈ ಮಾತುಗಳನ್ನು ಕೇಳಿ ಆ ಜ್ಯೋತಿಷಿಯ ಮಗನಾದ ಈ ಗಂಗಾಧರನಿಗೆ ದಿಕ್ಕೇ ತೋಚದಾಯಿತು. ಹುಲಿಯನ್ನು ಹೊರಕ್ಕೆ ತೆಗೆಯಲೋ ಬೇಡವೋ ? ಹೊರಕ್ಕೆ ತೆಗೆದಾಗ ಒಂದು ವೇಳೆ ಅದು ನನ್ನನ್ನೇ ಮೊದಲು ತಿಂದರೆ ? ಹಾಗಾಗಲಾರದು. ನನ್ನ ತಂದೆಯ ಜಾತಕ ಎಂದಿಗೂ ಸುಳ್ಳಾಗದು. ಹೀಗೆಂದು, ಯೋಚಿಸಿ ಅವನು ಆ ಹುಲಿಗೆ ಜೊಂಬನ್ನು ಭದ್ರವಾಗಿ ಹಿಡಿದುಕೊಳ್ಳುವಂತೆ ಹೇಳಿ, ಮೆಲ್ಲಗೆ ಹೊರಕ್ಕೆ ಎಳೆದನು. ಆ ಹುಲಿಯು ಹೊರಕ್ಕೆ ಬಂದ ಕೂಡಲೆ ತನ್ನ ಭಾಷೆಗೆ ತಪ್ಪದೆ ಆ ಬ್ರಾಹ್ಮಣನಿಗೆ ಪ್ರದಕ್ಷಿಣ ನಮಸ್ಕಾರ ಮಾಡಿ "ಓ ನನ್ನ ಜೀವದಾತ, ನನ್ನನ್ನು ಕಾಪಾಡಿದೆ. ನಾನು ಈ ಪವಿತ್ರ ದಿನವನ್ನು ಎಂದೆಂದಿಗೂ ಮರೆಯುವುದಿಲ್ಲ. ನನಗೆ ಇಂದು ನಿನ್ನಿಂದ ಪುನರ್ಜನ್ಮ. ಈ ಜೀವದಾನಕ್ಕಾಗಿ ನಾನು ನಿಮ್ಮ ಕಷ್ಟಕ್ಕೆಲ್ಲಾ ಸಹಾಯ ಮಾಡುತ್ತೇನೆ. ಕಷ್ಟದಲ್ಲಿ ಸಿಕ್ಕಿ ಬಿದ್ದಾಗ ನನ್ನನ್ನು ನೆನೆಯಿರಿ. ಆ ಕ್ಷಣ ನಾನು ನೀವಿದ್ದಲ್ಲಿಗೆ ಬಂದು, ನನ್ನ ಕೈಲಾದ ಸಹಾಯ ಮಾಡುತ್ತೇನೆ. ನಾನು ಇಲ್ಲಿಗೆ ಹೇಗೆ ಬಂದೆನೆಂಬುದನ್ನು ನಿಮಗೆ ಸೂಕ್ಷ್ಮವಾಗಿ ತಿಳಿಸುತ್ತೇನೆ. ಮೂರು ದಿನಗಳ ಹಿಂದೆ ಇದೇ ಪಕ್ಕದ ಕಾಡಿನಲ್ಲಿ ಅಲೆಯುತ್ತಿದ್ದಾಗ ಸೊನೆಗಾರ ಈ ಮಾರ್ಗವಾಗಿ ಹೋಗುತ್ತಿದ್ದುದನ್ನು ಕಂಡಕೂಡಲೆ ಅವನನ್ನು ಅಟ್ಟಿಸಿಕೊಂಡು ಹೋದೆ. ಅವನು ನನ್ನಿಂದ ತಪ್ಪಿಸಿಕೊಳ್ಳಲು ಬೇರೆ ದಾರಿ ಕಾಣದೆ, ಈ ಭಾವಿಯೊಳಕ್ಕೆ ಧುಮುಕಿದ. ಅವನು ಈಗಲೂ ಇದೇ ಭಾವಿಯ ನಾಲ್ಕನೇ ಹಂತದಲ್ಲಿ ಜೀವಂತವಾಗಿದ್ದಾನೆ. ನಾನೂ ಭಾವಿಯೊಳಕ್ಕೆ ಧುಮುಕಿದೆ. ಆದರೆ ಮೊದಲನೆಯ ಹಂತದಲ್ಲೇ ಸಿಕ್ಕಿಕೊಂಡೆ. ಭಾವಿಯ ಎರಡನೇ ಹಂತದಲ್ಲಿ ಹಸಿದ ಘಟಸರ್ಪವೊಂದಿದೆ. ಮೂರನೇ ಹಂತದಲ್ಲಿ ಒಂದು ಮೂಷಕವಿದೆ. ನೀವು ಮತ್ತೆ ನೀರು ಸೇದುವುದಕ್ಕೆ ಹೋದಾಗ ಈ ಪ್ರಾಣಿಗಳೂ ಅಕ್ಕಸಾಲಿಗನೂ ಇದೇ ರೀತಿ ನಿಮ್ಮನ್ನು ಬೇಡಿಕೊಳ್ಳಬಹುದು. ಸೊನ್ನಾಗಾರನಿಗೆ ಮಾತ್ರ ಸಹಾಯ ಮಾಡಬೇಡಿ. ಅವನು ಮನುಷ್ಯ ಜಾತಿಯವನಾದರೂ ನಿಮ್ಮ ಸಂಬಂಧಿಯೇ ಆಗಿದ್ದರೂ, ಕರುಣೆ ತೋರದಿರಿ. ಏಕೆಂದರೆ ಅವನು ನಂಬಿಕೆಗೆ ಅರ್ಹನಲ್ಲ. ನಾನು ಮೃಗವಾದರೂ, ನರ ಭಕ್ಷಕನೇ ಆದರೂ, ನನ್ನಲ್ಲಿ ಭರವಸೆಯನ್ನಿಡಬಹುದು. ಮನುಷ್ಯರನ್ನು ಕಚ್ಚಿ ಮರುಕ್ಷಣದಲ್ಲಿ ಅವನ ಪ್ರಾಣವನ್ನೇ ಕಳೆಯುವ ಈ ಘಟಸರ್ಪವನ್ನಾದರೂ ನಂಬಬಹುದು. ಮನೆಗಳಲ್ಲಿ ಸಾವಿರಾರು ಬಗೆ ಹಾವಳಿ ಮಾಡುವ ಈ ಮೂಷಕವನ್ನು ಕೂಡ ನಂಬಬಹುದು. ಸೋನೆಗಾರ ಮಾತ್ರ ವಿಶ್ವಾಸಘಾತಕ ಎಂದು ಹೇಳಿ ಆ ಹಸಿದ ಹುಲಿಯು ಕೂಡಲೆ ಅಲ್ಲಿಂದ ಹೊರಟುಹೋಯಿತು.

ಗಂಗಾಧರ ಆ ಮೃಗ ರಾಜನ ಮಾತುಗಳನ್ನು ಕೇಳಿ ಹಲವಾರು ಸಲ ತನ್ನಲ್ಲೇ ಯೋಚಿಸಿದ. ಆದರೆ ಅವನ ಬಾಯಾರಿಕೆ ಮಾತ್ರ ಪರಿಹಾರವಾಗಲಿಲ್ಲ. ಆದ್ದರಿಂದ ಅವನು ಜೊಂಬನ್ನು ಭಾವಿಯೊಳಕ್ಕೆ ಪುನಃ ಬಿಟ್ಟನು. ಈ ಸಲ ಹಾವು ಅದನ್ನು ಹಿಡಿದುಕೊಂಡು "ಓ ನನ್ನ ರಕ್ಷಕನೇ ನನ್ನನ್ನು ಮೇಲಕ್ಕೆತ್ತು. ನಾನು ಸರ್ಪರಾಜ, ನನ್ನನ್ನು ಪಾರುಮಾಡು. ನಾನು ಯಾವಾಗಲೂ ನಿನ್ನ ಸೇವಕನಾಗಿ ನಿನ್ನ ಉಪಕಾರವನ್ನು ನೆನೆಯುತ್ತೇನೆ. ಸಮಯ ಬಂದಾಗಲೆಲ್ಲ ನಿನಗೆ ಸಹಾಯ ಮಾಡುತ್ತೇನೆ. ದಯೆಯಿಟ್ಟು ನನ್ನನ್ನು ಕಾಪಾಡು" ಎಂದು ಬೇಡಿಕೊಂಡಿತು. ಗಂಗಾಧರನು 'ಸಮುದ್ರ ತೀರದಲ್ಲಿ ಮರಣ' ಎಂದು ಬರೆದಿದ್ದ ಜಾತಕದ ಮಾತನ್ನು ನೆನಪಿಗೆ ತಂದುಕೊಂಡು, ಆ ಸರ್ಪವನ್ನು ಹೊರಕ್ಕೆ ತೆಗೆದನು. ಆ ಸರ್ಪವೂ ಕೂಡ ಮೃಗರಾಜನಂತೆಯೇ ಮೂರು ಸಲ ಗಂಗಾಧರನಿಗೆ ಪ್ರದಕ್ಷಿಣೆ ಮಾಡಿ "ಓ ನನ್ನ ರಕ್ಷಕ, ತಂದೆ, ಈ ಮೊದಲೇ ಹೇಳಿದಂತೆ ನಾನು ಆದಿಶೇಷನ ಮಗ, ಸರ್ಪಗಳಿಗೆಲ್ಲಾ ರಾಜ. ನಾನು ಮೂರು ದಿನಗಳ ಹಿಂದೆ ಬಿಸಿಲಿನಲ್ಲಿ ಮೈ

ಮಲೆಯುತ್ತಿದ್ದಾಗ ನನ್ನ ಮುಂದೆ ಒಂದು ಇಲಿ ಹೋಗುತ್ತಿದ್ದುದನ್ನು ಕಂಡೆನು. ಕೂಡಲೆ ಅದನ್ನು ಅಟ್ಟಿಸಿಕೊಂಡು ಹೋದೆನು. ಆ ಇಲಿಯು ಈ ಭಾವಿಯೊಳಕ್ಕೆ ಬಿದ್ದಿತು. ನಾನೂ ಅದನ್ನು ಹಿಂಬಾಲಿಸಿದೆನು. ಆದರೆ, ಅದು ಬಿದ್ದ ಮೂರನೇ ಹಂತಕ್ಕೆ ಬೀಳದೆ, ಎರಡನೆಯ ಹಂತಕ್ಕೆ ಬಿದ್ದೆನು. ಮೂರನೇ ಹಂತದಲ್ಲಿ ಅದು ಇನ್ನೂ ಬದುಕಿದೆ. ಅದೇ ದಿನ ಸಂಜೆಗೆ ಅಕ್ಕಸಾಲಿಗನು ನಾಲ್ಕನೆಯ ಹಂತಕ್ಕೆ ಬಿದ್ದನು. ಈಗ ನೀನು ಹೊರಕ್ಕೆ ತೆಗೆದ ಹುಲಿಯು ಮೊದಲನೇ ಅಂತಸ್ತಿಗೆ ಬಿದ್ದಿತು. ಈಗ ನಾನು ಹೇಳುವುದೇನೆಂದರೆ, ನೀನು ಇಲಿಯನ್ನು ಹೊರಕ್ಕೆ ತೆಗೆದರೂ ಸೋನಗಾರನನ್ನು ಮಾತ್ರ ತೆಗೆಯಬೇಡ. ಏಕೆಂದರೆ, ಸೋನಗಾರನನ್ನು ಎಂದಿಗೂ ನಂಬಬಾರದು. ಈಗ ನಾನು ನನ್ನ ತಂದೆಯ ಬಳಿಗೆ ಹೋಗುತ್ತೇನೆ. ನೀನು ಕಷ್ಟದಲ್ಲಿದ್ದಾಗ ನನ್ನನ್ನು ಜ್ಞಾಪಿಸಿಕೊ. ನಾನು ಕೂಡಲೇ ಬಂದು ನನ್ನ ಕೈಲಾದ ಸಹಾಯವನ್ನು ಮಾಡುತ್ತೇನೆ. ನನ್ನ ಹಿತವಚನವನ್ನು ಕೇಳದೆ ನೀನು ಅಕ್ಕಸಾಲಿಗನನ್ನು ಹೊರಕ್ಕೆ ತೆಗೆದರೆ, ಅದಕ್ಕಾಗಿ ನೀನು ಬಹಳ ಕಷ್ಟಪಡಬೇಕಾಗುವುದು' ಎಂದು ಹೇಳಿ ಅದು ಕೂಡಲೇ ಹೊರಟು ಹೋಯಿತು.

ಬಾಯಾರಿಕೆಯಿಂದ ಪ್ರಾಣ ಹೋಗುವಂತಿದ್ದ ಆ ಬ್ರಾಹ್ಮಣನು, ತನ್ನ ತಂದೆ ಬರೆದಿಟ್ಟ ಜಾತಕದಲ್ಲಿ ಹೆಚ್ಚು ನಂಬಿಕೆಯುಳ್ಳವನಾದರೂ, ಅದನ್ನು ಲೆಕ್ಕಿಸದೆ, ಚೊಂಬನ್ನು ಮೂರನೆಯ ಸಲವೂ ಭಾವಿಯೊಳಕ್ಕೆ ಬಿಟ್ಟನು.

ಈಸಲ ಇಲಿಯು ಆ ಚೊಂಬನ್ನು ಹಿಡಿದುಕೊಂಡಿತು. ಗಂಗಾಧರನು ಯಾವ ಮಾತು ಕತೆಯೂ ಇಲ್ಲದೆ ಅದನ್ನು ಹೊರಕ್ಕೆ ತೆಗೆದನು. ಅದು ಹೊರಬಂದ ಕೂಡಲೆ ತನ್ನ ವಿಧೇಯತೆಯನ್ನು ತೋರಿ ಅವನನ್ನು ಕುರಿತು "ಓ ನನ್ನ ಪ್ರಾಣ ರಕ್ಷಕನೇ, ನನ್ನನ್ನು ಕಾಪಾಡಿದೆ. ನಾನು ಇಲಿಗಳ ರಾಜ, ನೀನು ಯಾವಾಗಲಾದರೂ ತೊಂದರೆಗೆ ಸಿಕ್ಕಿಬಿದ್ದಾಗ ನನ್ನನ್ನು ಜ್ಞಾಪಿಸಿಕೊ, ನಾನು ಆ ಕೂಡಲೆ ನಿನ್ನಲ್ಲಿಗೆ ಬಂದು ಸಹಾಯ ಮಾಡುತ್ತೇನೆ. ನೀನು ಈಗ ತಾನೇ ಹೊರಕ್ಕೆ ತೆಗೆದ ಮೃಗರಾಜ ಮತ್ತು ಸರ್ಪರಾಜ ಈ ಭಾವಿಯ ನಾಲ್ಕನೇ ಅಂತಸ್ತಿನಲ್ಲಿರುವ ಸೋನೆಗಾರ (ಸ್ವರ್ಣತಸ್ಕರ)ನ ವಿಚಾರವಾಗಿ ಇದುವರೆಗೂ ಹೇಳಿದುದನು ನಾನು ಕೇಳದೆ ಇಲ್ಲ. ಸೋನೆಗಾರನು ನಂಬಿಕೆಗೆ ಅರ್ಹನು ಎಂಬುದು ಬರೀ ಪೊಳ್ಳು ಮಾತು. ನೀನು ನಮಗೆಲ್ಲ ಸಹಾಯ ಮಾಡಿದಂತೆ ಅವನಿಗೆ ಮಾಡಬೇಡ. ಒಂದು ವೇಳೆ ನೀನು ಸಹಾಯ ಮಾಡಿದರೆ, ಅದಕ್ಕಾಗಿ ಬಹಳ ಕಷ್ಟವನ್ನನುಭವಿಸುವಿ"– ಎಂದು ಹೇಳಿ ಆ ಹಸಿದ ಇಲಿ ಕೂಡಲೇ ಹೊರಟುಹೋಯಿತು.

ಆ ಮೂರು ಪ್ರಾಣಿಗಳೂ ಸೋನೆಗಾರನನ್ನು ಹೊರಕ್ಕೆ ತೆಗೆಯುವ ವಿಚಾರದಲ್ಲಿ ಹೇಳಿದ ಬುದ್ಧಿವಾದವನ್ನು ಕುರಿತು, ಗಂಗಾಧರ ಸ್ವಲ್ಪಹೊತ್ತು ಆಲೋಚಿಸಿದನು. 'ಅಕ್ಕಸಾಲಿಗನಿಗೆ ಸಹಾಯ ಮಾಡುವುದರಿಂದ ನನಗೇನು ನಷ್ಟ ? ನಾನು ಅವನನ್ನೂ ಕೂಡ ಏಕೆ ಹೊರ ತೆಗೆಯಬಾರದು" ಎಂದು ಮನಸ್ಸಿನಲ್ಲೇ ಹೇಳಿಕೊಳ್ಳುತ್ತಾ ಚೊಂಬನ್ನು ನಾಲ್ಕನೆಯ ಸಲವೂ ಭಾವಿಯೊಳಕ್ಕೆ ಬಿಟ್ಟನು. ಸೋನೆಗಾರನೂ ಅದನ್ನು ಹಿಡಿದು, ಸಹಾಯ ಮಾಡುವಂತೆ ಕೇಳಿಕೊಂಡನು. ಗಂಗಾಧರನು ವಿಶೇಷವಾಗಿ ಬಾಯಾರಿದುದರಿಂದ, ಯೋಚನೆಗೂ ಅವಕಾಶ ಕೊಡದೆ, ಸೋನೆಗಾರನನ್ನು ಹೊರಕ್ಕೆ ತೆಗೆದನು. ಅವನು ಹೊರಕ್ಕೆ ಬಂದ ಕೂಡಲೆ ತನ್ನ ಕಥೆಯನ್ನು ಹೇಳುವುದಕ್ಕೆ ಪ್ರಾರಂಭಿಸಿದನು. ಗಂಗಾಧರನು ಅವನಿಗೆ ಸ್ವಲ್ಪಹೊತ್ತು ಸುಮ್ಮನಿರುವಂತೆ ಹೇಳಿ, ಚೊಂಬನ್ನು ಮತ್ತೆ ಭಾವಿಯೊಳಕ್ಕೆ ಬಿಟ್ಟು ನೀರು ಸೇದಿ ಕುಡಿದ ನಂತರ, ಅವನ ಕಥೆಯನ್ನು ಕೇಳಿದನು. ಅದಕ್ಕೆ ಆ ಸೋನೆಗಾರನು "ಓ ನನ್ನ ಸ್ನೇಹಿತನೇ, ರಕ್ಷಕನೇ, ಆ ದುಷ್ಟ ಮೃಗಗಳು ನನ್ನ ವಿಚಾರವಾಗಿ ಏನೇನೋ ಹೇಳುತ್ತಿದ್ದವು. ಆದರೆ ನೀನು ಅವುಗಳನ್ನೆಲ್ಲಾ ಲೆಕ್ಕಿಸದೆ ನನ್ನನ್ನು ಕಾಪಾಡಿದೆ. ನಾನು ಹಸಿವಿನಿಂದ ಸಾಯುತ್ತಿದ್ದೇನೆ. ನಾನು ಹೋಗಲು ಅನುಮತಿಯನ್ನು ಕೊಡು. ನನ್ನ ಹೆಸರು ಮಾಣಿಕ್ಯಾಚಾರಿ. ಇಲ್ಲಿಗೆ ಇಪ್ಪತ್ತು ಗಾವುದ ದೂರದಲ್ಲಿರುವ ಉಜ್ಜಯಿನಿಯಲ್ಲಿ ನಾನು ವಾಸವಾಗಿದ್ದೇನೆ. ನೀನು ಕಾಶಿಯಿಂದ ಹಿಂದಿರುಗುವಾಗ ನನ

ಮನೆಗೆ ಬಂದು ಆತಿಥ್ಯವನ್ನು ಪಡೆಯಬೇಕು" ಎಂದು ಹೇಳಿ ಹೊರಟು ಹೋದನು ಗಂಗಾಧರನು ಕಾಶಿಗೆ ತನ್ನ ಪ್ರಯಾಣವನ್ನು ಮುಂದುವರಿಸಿದನು.

ಗಂಗಾಧರನು ಕಾಶಿಯನ್ನು ಸೇರಿ ಹತ್ತು ವರ್ಷಕ್ಕೂ ಹೆಚ್ಚುಕಾಲವನ್ನು ಸ್ನಾನ, ಜಪ, ತಪ, ಪ್ರಾರ್ಥನೆ, ಪೂಜೆ ಮುಂತಾದ ದೇವಕಾರ್ಯಗಳಲ್ಲಿ ಕಳೆದನು. ಹುಲಿ, ಹಾವು ಇಲಿ ಮತ್ತು ಸೋನೆಗಾರರನ್ನು ಮರೆತೇ ಬಿಟ್ಟನು. ಆ ಹತ್ತು ವರ್ಷ ಮುಗಿದ ಮೇಲೆ ತನ್ನ ಮನೆ ಮತ್ತು ಅಣ್ಣನ ನೆನಪು ಮನವನ್ನು ಹೊಕ್ಕಿತು. "ಈವರೆಗೂ ನಾನು ಧಾರ್ಮಿಕ ಜೀವನದಿಂದ ಗಳಿಸಿದ ಜ್ಞಾನ ಸಾಕು. ಇನ್ನು ಮನೆಗೆ ಹಿಂದಿರುಗೋಣ" ಎಂದು ನಿರ್ಧರಿಸಿ, ತನ್ನ ಊರಿನದಾರಿಯನ್ನು ಹಿಡಿದನು. ತನ್ನ ತಂದೆ ಹೇಳಿದ್ದ ಭವಿಷ್ಯವನ್ನು ಜ್ಞಾಪಿಸಿಕೊಂಡು, ಹತ್ತು ವರ್ಷಗಳ ಹಿಂದೆ ಬಂದ ಮಾರ್ಗವಾಗಿಯೇ ಹಿಂದಿರುಗಿದನು. ತಾನು ಮೊದಲು ಕಾಶಿಗೆ ಹೋಗುವಾಗ ದಾರಿಯಲ್ಲಿ ಮೃಗಗಳನ್ನೂ, ಅಕ್ಕಸಾಲಿಗನನ್ನೂ ಹೊರಕ್ಕೆ ತೆಗೆದ ಹಾಳು ಭಾವಿಯ ಹತ್ತಿರ ಬಂದನು. ಅಲ್ಲಿಗೆ ಬಂದ ಕೂಡಲೆ, ಅವನಿಗೆ ಮೊದಲು ನಡೆದ ವಿಚಾರವೆಲ್ಲಾ ನೆನಪಿಗೆ ಬಂದಿತು ಹುಲಿಯ ಪ್ರಮಾಣವನ್ನು ಪರೀಕ್ಷಿಸಲು, ಅದನ್ನು ನೆನಪಿಸಿಕೊಂಡನು. ಒಂದು ಕ್ಷಣದಲ್ಲಿಯೇ ಆ ಹುಲಿಯು, ಸೂರ್ಯನಿಗಿಂತಲೂ ಹೆಚ್ಚು ಪ್ರಕಾಶಮಾನವಾಗಿದ್ದ ಒಂದು ಕಿರೀಟವನ್ನು ಹೊತ್ತುಕೊಂಡು ಓಡಿ ಬಂದಿತು. ಅದು ಆ ಕಿರೀಟವನ್ನು ತನ್ನ ಪ್ರಾಣದಾತನ ಕಾಲುಗಳ ಮೇಲಿಟ್ಟು, ತನ್ನ ವಿಧೇಯತೆಯನ್ನು ತೋರ್ಪಡಿಸಿಕೊಂಡು "ಓ ನನ್ನ ಜೀವದಾತ, ಈವರೆಗೂ ನನ್ನನ್ನು ಜ್ಞಾಪಿಸಿಕೊಳ್ಳಲಿಲ್ಲ. ಹೋಗಲಿ, ಈಗಲಾದರೂ ನೀನು ನೆನಸಿದೆಯಲ್ಲ, ಅದಕ್ಕಾಗಿ ನನಗೆ ಬಹಳ ಸಂತೋಷ. ನನ್ನ ರಕ್ಷಕನನ್ನು ನಾನು ಎಂದಿಗೂ ಮರೆಯಲಾರೆ. ನನ್ನಲ್ಲಿ ಬೆಲೆ ಬಾಳುವ ಕೆಲವು ರತ್ನಗಳಿವೆ. ಅವುಗಳಲ್ಲೆಲ್ಲಾ ಈ ಕಿರೀಟವು ಹೆಚ್ಚು ಬೆಲೆಯುಳ್ಳದು. ಸುಲಭವಾಗಿ ತೆಗೆದುಕೊಂಡು ಹೋಗಲು ಸುಲಭ ಸಾಧ್ಯವಾದುದು. ಆದುದರಿಂದ ಇದನ್ನು ತಂದಿದ್ದೇನೆ. ನಿಮ್ಮ ದೇಶದಲ್ಲಿ ಇದರಿಂದ ನಿಮಗೆ ಹೆಚ್ಚು ಪ್ರಯೋಜನವಾಗಬಹುದು", ಎಂದು ಹೇಳಿತು. ಗಂಗಾಧರನು ಆ ಕಿರೀಟವನ್ನು ಮತ್ತೆ ಮತ್ತೆ ನೋಡಿ, ಅದರ ರತ್ನಗಳನ್ನು ಬಂಗಾರದಿಂದ ಬೇರ್ಪಡಿಸಿದರೆ, ತಾನು ಎಲ್ಲರಿಗಿಂತಲೂ ಹೆಚ್ಚು ಐಶ್ವರ್ಯವಂತನಾಗುವೆನೆಂದು ಯೋಚಿಸಿದನು. ಅವನು ಹುಲಿಯನ್ನು ಕಳುಹಿಸಿಕೊಟ್ಟು ಸರ್ಪರಾಜನನ್ನೂ, ಇಲಿಯನ್ನೂ ನೆನಸಿಕೊಂಡನು. ಕೂಡಲೆ ಅವು ತಮ್ಮ ಉಡುಗೊರೆಗಳೊಂದಿಗೆ ಬಂದು ನಿಂತವು. ಯೋಗಕ್ಷೇಮವನ್ನು ವಿಚಾರಿಸಿ, ಅಪ್ಪಣೆ ಪಡೆದು ಹೊರಟು ಹೋದುವು. ಗಂಗಾಧರನು ಆ ಪ್ರಾಣಿಗಳ ನಡವಳಿಯನ್ನು ಕಂಡು ಬಹಳ ಸಂತೋಷಪಟ್ಟನು. ಆ ಪ್ರಾಣಿಗಳೇ ಇಷ್ಟು ಪ್ರೀತಿ ವಿಶ್ವಾಸಗಳಿಂದ ನಡೆದುಕೊಂಡಿರುವಾಗ, ಸೋನೆಗಾರ ಮಾಣಿಕ್ಯಾಚಾರಿಯು ಇನ್ನೆಷ್ಟರ ಮಟ್ಟಿಗೆ ನಡೆದುಕೊಳ್ಳಬಹುದೊ ! ನನಗೆ ಅವನಿಂದ ಈಗ ಏನೂ ಬೇಕಾಗಿಲ್ಲ. ಈ ಕಿರೀಟವನ್ನು ಹೀಗೆಯೇ ತೆಗೆದುಕೊಂಡು ಹೋದರೆ, ದಾರಿಯಲ್ಲಿ ಅದು ಕಳ್ಳರ ಕಣ್ಣಿಗೆ ಬೀಳಬಹುದು. ಆದ್ದರಿಂದ ಊರಿಗೆ ಹೋಗುವಾಗ ಉಜ್ಜೈನಿಯ ಮಾರ್ಗವಾಗಿಯೇ ಹೋಗಬೇಕು. ಅಲ್ಲದೆ, ಅಕ್ಕಸಾಲಿಗನು, ನಾನು ಹಿಂತಿರುಗುವಾಗ ಉಜ್ಜೈನಿಗೆ ಹೋಗಿ, ಈ ಕಿರೀಟದ ಮುತ್ತುಗಳನ್ನೂ ಚಿನ್ನವನ್ನೂ ಆ ಮಾಣಿಕ್ಯಾಚಾರಿಯಿಂದ ಬೇರ್ಪಡಿಸಿ ತೆಗೆದುಕೊಂಡು ಹೋಗುವೆನು. ಅವನು ಕೊನೆಯಪಕ್ಷ ಈ ಸಹಾಯವನ್ನಾದರೂ ಮಾಡದಿರುವನೆ ? ಬೇರ್ಪಡಿಸಿದ ಮೇಲೆ, ನಾನು ಆ ಬಂಗಾರದ ಘಟ್ಟಿಯನ್ನೂ ಮುತ್ತುಗಳನ್ನೂ ನನ್ನ ಬಟ್ಟೆ ಚಿಂದಿಗಳಲ್ಲಿ ಸುಲಭವಾಗಿ ಸುತ್ತಿಕೊಂಡು ಅವುಗಳ ಸಂಗತಿ ಯಾರಿಗೂ ತಿಳಿಯದಂತೆ ಮನೆಗೆ ಹೋಗಬಹುದು' ಎಂದು ಯೋಚಿಸುತ್ತಾ ಉಜ್ಜೈನಿಯನ್ನು ಸೇರಿದನು. ಅಲ್ಲಿ ಮಾಣಿಕ್ಯಾಚಾರಿಯು ಮನೆಯನ್ನು ವಿಚಾರಿಸಿಕೊಂಡು ಹೋದನು. ಮಾಣಿಕ್ಯಾಚಾರಿಗೆ ಗಂಗಾಧರನನ್ನು ಕಂಡ ಕೂಡಲೇ ಬಹಳ ಸಂತೋಷವಾಯಿತು. ಹುಲಿ, ಹಾವು, ಇಲಿ ಎಷ್ಟು ಹೇಳಿದರೂ ಕೇಳದೆ, ಗಂಗಾಧರನು ತನ್ನನ್ನು ಭಾವಿಯಿಂದ ಹೊರಕ್ಕೆ ತೆಗೆದ ಉಪಕಾರವು ಮಾಣಿಕ್ಯಾಚಾರಿಯ ಜ್ಞಾಪಕಕ್ಕೆ ಬಂದಿತು. ಗಂಗಾಧರನು ಹುಲಿಯು ಕೊಟ್ಟ ಕಿರೀಟವನ್ನು ಅವನಿಗೆ ತೋರಿಸಿ, ಅದರ ಮುತ್ತುಗಳನ್ನೂ ಚಿನ್ನವನ್ನೂ ಬೇರ್ಪಡಿಸಿ ಕೊಡುವಂತೆ ಕೇಳಿಕೊಂಡನು.

ಮಾಣಿಕ್ಯಾಚಾರಿ ಅದಕ್ಕೆ ಒಪ್ಪಿ ಗಂಗಾಧರನಿಗೆ ಮೊದಲು ಸ್ವಲ್ಪ ವಿಶ್ರಾಂತಿ ಪಡೆದು, ನಂತರ ಸ್ನಾನ ಮತ್ತು ಊಟವನ್ನು ಮುಗಿಸಿಕೊಳ್ಳುವಂತೆ ಹೇಳಿದನು. ಆಚಾರವಂತನಾದ ಗಂಗಾಧರ ಸ್ನಾನಕ್ಕಾಗಿ ನದಿಗೆ ಹೋದನು. ಹುಲಿಗೆ ಕಿರೀಟವೆಲ್ಲಿಂದ ಬಂದಿತು? ಯಾವುದೋ ರಾಜನದಾಗಿರಬಹುದು. ಉಜ್ಜೈನಿಯ ರಾಜನು ಒಂದು ವಾರದ ಕೆಳಗೆ ಬೇಟೆಗೆ ಹೋಗಿದ್ದಾಗ, ಒಂದು ಹುಲಿ ಕಾಡಿನಿಂದ ಬಂದು ಆ ರಾಜನನ್ನು ಎಳೆದುಕೊಂಡು ಹೋಯಿತಂತೆ. ಅದು ಎಳೆದುಕೊಂಡು ಹೋಗುತ್ತಿದ್ದುದನ್ನು ರಾಜನ ಜೊತೆಯಲ್ಲಿದ್ದ ಬೇಟೆಗಾರರನ್ನೆಲ್ಲಾ ನೋಡಿದರಂತೆ. ಅವರು ಹಿಂತಿರುಗಿ ಈ ವಿಚಾರವನ್ನು ಯುವರಾಜನಿಗೆ ತಿಳಿಸಲು ಯುವರಾಜನು ತಂದೆಯ ಮರಣಕ್ಕಾಗಿ ಹೆಚ್ಚಿನ ವಿವರವನು ತಂದವರಿಗೆ ಅರ್ಧ ರಾಜ್ಯವನ್ನು ಕೊಡುವುದಾಗಿ ಒಂದು ಹೇಳಿಕೆಯನ್ನು ಹೊರಡಿಸಿದ್ದನು. ಹುಲಿಯು ತನ್ನ ತಂದೆಯನ್ನು ಎಳೆದುಕೊಂಡು ಹೋಯಿತು ಎನ್ನುವುದರಲ್ಲಿ ಯುವರಾಜನಿಗೆ ನಂಬಿಕೆಯೇ ಇರಲಿಲ್ಲ. ಯಾರೋ ದುರಾತ್ಮರು ಒಡವೆಗಳ ಆಸೆಯಿಂದ ತಂದೆಯನ್ನು ಕೊಂದಿರಬಹುದೆಂದು ಹೇಳಿಕೆಯನ್ನು ಹೊರಡಿಸಿದ್ದನು. ಇದೀಗ ಹುಲಿಯೇ ರಾಜನನ್ನು ಎಳೆದುಕೊಂಡು ಹೋಗಿದ್ದಿತೆಂಬುದನ್ನು ಮಾಣಿಕ್ಯಾಚಾರಿ ಬಲ್ಲವನಾಗಿದ್ದನು. ಅದೂ ಅಲ್ಲದೆ, ಗಂಗಾಧರನು ಆ ಕಿರೀಟವನ್ನು ಹೇಗೆ ತಂದನೆಂಬುದನ್ನೂ ಹೇಳಿದ್ದನು. ಈಗ ನಾನು ಹೋಗಿ ಗಂಗಾಧರನೇ ರಾಜನನ್ನು ಕೊಂದವನೆಂದು ಹೇಳಬೇಕು', ಎಂದು ಮಾಣಿಕ್ಯಾಚಾರಿ ನಿರ್ಧರಿಸಿದನು. ಗಂಗಾಧರನು ಬರುವುದರೊಳಗಾಗಿ ಅವನು ಆ ಕಿರೀಟವನ್ನು ಬಚ್ಚಿಟ್ಟುಕೊಂಡು ಅರಮನೆಗೆ ತೆಗೆದುಕೊಂಡುಹೋಗಿ, ಅದನ್ನು ಯುವರಾಜನಿಗೊಪ್ಪಿಸಿ, ರಾಜನನ್ನು ಕೊಂದವನನ್ನು ಹಿಡಿದು ತರುವುದಾಗಿ ತಿಳಿಸಿದನು. ಯುವರಾಜನು ಕಿರೀಟವನ್ನು ಪರೀಕ್ಷಿಸಿ, ಕೂಡಲೆ ಅರ್ಧ ರಾಜ್ಯವನ್ನು ಮಾಣಿಕ್ಯಾಚಾರಿಗೆ ಕೊಟ್ಟು, ಕೊಲೆಗಾರನೆಲ್ಲಿ ಎಂದು ಕೇಳಿದನು. ಅವನು ನದಿಯಲ್ಲಿ ಸ್ನಾನ ಮಾಡುತ್ತಿರುವನೆಂದು, ಅವನ ಕುರುಹುಗಳನ್ನು ಮಾಣಿಕ್ಯಾಚಾರಿಯು ತಿಳಿಸಿದನು. ಕೂಡಲೆ ನಾಲ್ಕು ಜನ ರಾಜಭಟರು ನದಿಗೆ ಹೋಗಿ, ಅಲ್ಲಿ ಯಾವ ವಿಚಾರವನ್ನೂ ತಿಳಿಯದೆ ಸಂಧ್ಯಾವಂದನೆ ಮಾಡುತ್ತಿದ್ದ ಗಂಗಾಧರನ ಕೈಕಾಲುಗಳಿಗೆ ಬೇಡಿಗಳನ್ನು ತೊಡಿಸಿ ಯುವರಾಜನಲ್ಲಿಗೆ ಕರೆತಂದರು. ಯುವರಾಜನು ಕೊಲೆಗಾರನನ್ನು (ಕೊಲೆಗಾರನೆಂದು ಹೇಳಲ್ಪಟ್ಟವನನ್ನು) ನೋಡಿ ಕಾರಾಗೃಹಕ್ಕೆ ತಳ್ಳುವಂತೆ ಆಜ್ಞೆ ಮಾಡಿದನು. ಏನೊಂದೂ ತಿಳಿಯದ ಗಂಗಾಧರನು ಒಂದು ಕ್ಷಣದಲ್ಲಿ ಕತ್ತಲೆ ಗವಿಯಂತಿದ್ದ ಸೆರೆಮನೆಯಲ್ಲಿ ಬಂದು ಬಿದ್ದನು.

ಹಿಂದಿನ ಕಾಲದ ಸೆರೆಮನೆಗಳು ಗಾಳಿ, ಬೆಳಕು ಸಂಚಾರವೇ ಇಲ್ಲದ ಕತ್ತಲೆಗವಿಗಳಾಗಿದ್ದುವು. ಅವನ್ನು ಕಲ್ಲುಗಳಿಂದ ಕಟ್ಟುತ್ತಿದ್ದರು. ಅಲ್ಲಿಗೆ ಹೋದವರು ಆಹಾರವಿಲ್ಲದೆ, ಅಲ್ಲೇ ಸಾಯಬೇಕಾಗಿತ್ತು. ಗಂಗಾಧರನನ್ನೂ ಅಂತಹ ನೆಲಮಾಳಿಗೆಯೊಳಕ್ಕೆ ತಳ್ಳಿದರು. ಅವನು ಆ ನೆಲಮಾಳಿಗೆಯಲ್ಲಿ ಸತ್ತವರನ್ನೂ, ಸಾಯುತ್ತಿದ್ದವರನ್ನೂ ನೋಡಿದನು. ಉಜ್ಜೈನಿಗೆ ಬಂದಾಗ ಗಂಗಾಧರ ಯಾವ ಆಲೋಚನೆಗಳಿಂದ ಕೂಡಿದ್ದ? ಈಗ ನಡೆದುದಕ್ಕೆಲ್ಲಾ ಅಕ್ಕಸಾಲಿಗನೇ ಕಾರಣನಲ್ಲವೆ? ಅದು ಹೋಗಲಿ, ಯುವರಾಜನಾದರೂ ನನಗೆ ಆ ಕಿರೀಟ ಹೇಗೆ ಬಂತೆಂಬುದನ್ನು ವಿಚಾರಿಸಬಾರದೆ? ಈಗ ಯುವರಾಜನನ್ನಾಗಲಿ, ಅಕ್ಕಸಾಲಿಗನನ್ನಾಗಲಿ, ದೂಷಿಸಿ ಫಲವಿಲ್ಲ. ನಾವೆಲ್ಲರೂ ವಿಧಿಯ ಸೂತ್ರದ ಬೊಂಬೆಗಳು. ಅವನ ಆಜ್ಞೆಗೆ ತಲೆಬಾಗಲೇ ಬೇಕು. "ಹತ್ತು ವರ್ಷ ಬಂಧನ" ಎಂದು ನನ್ನ ತಂದೆ ಬರೆದಿಟ್ಟುದು ಈಗ ನಿಜವಾಯಿತು. ಆದರೆ ನಾನಿಲ್ಲಿ ಹತ್ತುವರ್ಷ ಹೇಗೆ ಕಳೆಯಲಿ. ತಿಂಡಿತೀರ್ಥವಿಲ್ಲದೆ ಒಂದೆರಡು ದಿನಗಳಲ್ಲಿಯೇ ನಾನಿಲ್ಲಿ ಸತ್ತುಹೋಗಬಹುದು. ಹತ್ತುವರ್ಷಗಳು ಇಲ್ಲಿ ಜೀವಿಸಿರುವುದು ಹೇಗೆ? ಅದು ಸಾಧ್ಯವಿಲ್ಲ ನನಗೆ ಮರಣವೇ ಗತಿ. ಸಾಯುವುದಕ್ಕೆ ಮುಂಚೆ ನನಗೆ ವಿಧೇಯರಾದ ಆ ಪ್ರಾಣಿಗಳನ್ನು ಒಂದು ಸಲ ಜ್ಞಾಪಿಸಿಕೊಳ್ಳೋಣ ಎಂದುಕೊಂಡನು.

ಗಂಗಾಧರನು ಸೆರೆಮನೆಯಲ್ಲಿ ಸ್ವಲ್ಪಹೊತ್ತು ಅಲೆ

ದಾಡಿ ಆ ಮೂರು ಪ್ರಾಣಿಗಳನ್ನು ನೆನಸಿಕೊಂಡನು. ಹುಲಿ, ಹಾವು, ಇಲಿ ಇವು ಮೂರು ಒಟ್ಟುಗೂಡಿ ತಮ್ಮ ತಮ್ಮ ಪರಿವಾರದೊಂದಿಗೆ ಸೆರೆಮನೆಯ ಹತ್ತಿರದ ತೋಟದಲ್ಲಿ ಬೀಡು ಬಿಟ್ಟವು. ಕ್ಷಣಕಾಲ ಆ ಪ್ರಾಣಿಗಳಿಗೆ ಏನುಮಾಡಬೇಕೆಂಬುದೇ ತೋರಲಿಲ್ಲ. ಕೊನೆಗೆ ಅವೆಲ್ಲಾ ಸಭೆಸೇರಿ ಹಾಳುಬಿದ್ದಿದ್ದ ಬಾವಿಯೊಂದರಿಂದ ಸೆರೆಮನೆಗೆ ಸುರಂಗವನ್ನು ಮಾಡಬೇಕೆಂದು ನಿರ್ಧರಿಸಿದವು. ಇಲಿಯು ತನ್ನ ಸೈನ್ಯಕ್ಕೆ ಆಜ್ಞೆ ಮಾಡಿತು. ಅವು ತಮ್ಮ ಹರಿತವಾದ ಉಗುರು, ಹಲ್ಲುಗಳಿಂದ ನೆಲವನ್ನು ತೋಡಿಕೊಂಡು ಅರಮನೆಯ ಗೋಡೆಯನ್ನು ತಲುಪಿದವು. ಆದರೆ, ಕಾರಾಗೃಹದ ಗೋಡೆಯನ್ನು ಕೊರೆಯಲು ಆ ಇಲಿಗಳ ಹಲ್ಲುಗಳಿಗೆ ಶಕ್ತಿಯಿಲ್ಲದೆ ಹೋಯಿತು. ಆಗ ಹೆಗ್ಗಣಗಳನ್ನು ಬರಮಾಡಿಕೊಂಡು, ಅವುಗಳ ಸಹಾಯದಿಂದ ಒಂದು ಇಲಿ ಸೆರೆಮನೆಯ ಒಳಕ್ಕೂ ಹೊರಕ್ಕೂ ಹೋಗಿಬರುವಷ್ಟುಮಾತ್ರ ರಂಧ್ರಕೊರೆಯಿಸಲಾಯಿತು. ಈ ರೀತಿ ಒಂದುದಾರಿ ಸಿದ್ಧನಾಯಿತು.

ಮೊದಲು ಇಲಿಗಳರಾಜನು ತನ್ನ ರಕ್ಷಕನನ್ನು ಸಮಾಧಾನಪಡಿಸಲು ಸೆರೆಮನೆಯೊಳಕ್ಕೆ ಹೋಯಿತು. ಹುಲಿಯು ತನ್ನ ವ್ಯಸನವನ್ನು ತೋರ್ಪಡಿಸಿ ತನ್ನ ಕೈಲಾದ ಸಹಾಯವನ್ನುಮಾಡುವುದಾಗಿ ತಿಳಿಸುವಂತೆ ಹೇಳಿಕಳುಹಿಸಿತು. ಹಾವು ಸೆರೆಮನೆಯನ್ನು ಹೊಕ್ಕು ಗಂಗಾಧರನನ್ನು ಕಂಡು, ಅದಕ್ಕೂ ಬೇಗನೆ ಅವನನ್ನು ಬಿಡುಗಡೆ ಮಾಡುವುದಾಗಿ ಭರವಸೆ ಕೊಟ್ಟಿತು. ಇಲಿರಾಜನು ಗಂಗಾಧರನಿಗೆ ತಿಂಡಿ ಪದಾರ್ಥಗಳನ್ನು ಒದಗಿಸುವ ಕೆಲಸವನ್ನು ವಹಿಸಿಕೊಂಡಿತು. ಮನೆ ಮನೆಗಳಲ್ಲಿ ಮಾಡಿದ ತಿಂಡಿಗಳನ್ನೆಲ್ಲಾ ತೆಗೆದುಕೊಂಡು ಬರುವಂತೆ ತನ್ನ ಸೈನ್ಯಕ್ಕೆ ಆ ಇಲಿಯು ಅಪ್ಪಣೆ ಮಾಡಿತು. ಅದರಂತೆಯೇ ಅವೆಲ್ಲವನ್ನೂ, ನೀರಿನಲ್ಲಿ ನೆನಸಿದ ಬಟ್ಟೆಗಳನ್ನೂ ಗಂಗಾಧರನಿಗೆ ತಂದುಕೊಡುತ್ತಿದ್ದವು.

ಸರ್ಪಗಳ ರಾಜನು ಗಂಗಾಧರನಿಗೆ, ನಿಮ್ಮ ಕಷ್ಟವನ್ನು ಕಂಡು ನನಗೆ ಬಹಳ ವ್ಯಸನವಾಗಿದೆ. ಹುಲಿಯು ಇಲ್ಲಿಗೆ ಬರಲಾರದೆ ತನ್ನ ದುಃಖವನ್ನು ವ್ಯಕ್ತಪಡಿಸಿದೆ. ಇಲಿಗಳ ರಾಜನು ನಿಮ್ಮ ಆಹಾರಕ್ಕೆ ಅವಶ್ಯವಾದ ಪದಾರ್ಥಗಳನ್ನೆಲ್ಲಾ ಒದಗಿಸುವುದಾಗಿ ಹೇಳಿದ್ದಾನೆ. ನಾವು ಮೂವರು ನಿಮ್ಮ ಬಿಡುಗಡೆಗಾಗಿ ನಮ್ಮ ಕೈಲಾದುದನ್ನೆಲ್ಲಾ ಮಾಡುತ್ತೇವೆ. ಈ ದಿನದಿಂದ ಈ ರಾಜ್ಯದ ಜನಗಳಿಗೆ ಎಲ್ಲಾ ಬಗೆಯ ಕಷ್ಟಗಳನ್ನು ಕೊಡುವಂತೆ ನಮ್ಮ ಸೈನ್ಯಗಳಿಗೆ ಆಜ್ಞೆಮಾಡಿದ್ದೇವೆ. ನಿಮ್ಮ ಬಿಡುಗಡೆಯಾಗುವವರೆಗೂ ಪ್ರತಿದಿನವೂ ಈ ಬಾಧೆಯನ್ನು ಹೆಚ್ಚಿಸುತ್ತೇವೆ. ಹಾವಿನ ಕಡಿತದಿಂದ, ಹುಲಿಗಳ ಹಾವಳಿಯಿಂದ, ಪ್ರತಿದಿನವೂ ಜನಗಳ ಮರಣ ಹೆಚ್ಚುತ್ತಾ ಹೋಗುತ್ತಿರುತ್ತದೆ. ನಿನ ಬಿಡುಗಡೆಯಾಗುವವರೆಗೂ ಈ ಹಾವಳಿ ನಿಲ್ಲುವುದೇಇಲ್ಲ ಇಲಿಗಳು ತಂದು ಕೊಡುವ ತಿಂಡಿಯನ್ನು ತಿಂದು ನೀನು ಸೆರೆಮನೆಯ ಬಾಗಿಲಲ್ಲೇ ಕುಳಿತಿರು. ಈ ಆಕಸ್ಮಿಕ ಸಾವಿನಿಂದ ಸೆರೆಮನೆಯ ಬಳಿಗೆ ಬರುವ ಜನರು ರಾಜನ ಅನ್ಯಾಯವನ್ನು ತಿಳಿದು, ಅದರ ದೆಸೆಯಿಂದಲೇ ಈ ದುರ್ಮರಣಗಳು ಹಾವು ಮತ್ತು ಹುಲಿಗಳಿಂದ ನಡೆಯುತ್ತಿವೆ ಎಂದು ಮಾತನಾಡಿಕೊಳ್ಳುವರು. ಅವರು ಹೀಗೆ ಮಾತನಾಡಿಕೊಳ್ಳುತ್ತಿರುವಾಗ, ನೀನು 'ನನ್ನನ್ನು ಅಕಾರಣವಾಗಿ ಬಂಧಿಸಿದ್ದರಿಂದ ಈ ಅನಾಹುತಗಳಾಗುತ್ತಿವೆ' ಎಂದು ಅವರಿಗೆ ಕೇಳಿಸುವಂತೆ ಗಟ್ಟಿಯಾಗಿ ಕಿರಿಚಿಕೋ. ನಿನ್ನನ್ನುಬಿಡುಗಡೆ ಮಾಡಿದರೆ ಈ ಅನಾಹುತಗಳನ್ನು ತಪ್ಪಿಸುವುದಾಗಿ ಹೇಳು ಇದನ್ನು ಕೇಳಿದ ಯಾರಾದರೊಬ್ಬರು ಈ ವಿಷಯವನ್ನು ರಾಜನಿಗೆ ತಿಳಿಸುವರು. ಆಗ ವಿಚಾರಣೆ ನಡೆದು, ನಿನ್ನ ಬಿಡುಗಡೆಯಾಗುವುದು, ಎಂದು ಹಾವು ಗಂಗಾಧರನಿಗೆ ತಿಳಿಸಿ ಸಮಾಧಾನ ಪಡಿಸಿ ಹಿಂದಿರುಗಿತು. ಅಂದಿನಿಂದ ಹುಲಿಗಳೂ ಹಾವುಗಳೂ, ಒಟ್ಟುಗೂಡಿ ಸಾಧ್ಯವಾದಷ್ಟು ಜನರನ್ನು ಕೊಲ್ಲುತ್ತಾ ಬಂದವು ಸೆರಮನೆಯಲ್ಲಿ ಗಂಗಾಧರನನ್ನು ಬಿಡುಗಡೆ ಮಾಡಿದರೆ ಈ ತೊಂದರೆಯನ್ನು ತಪ್ಪಿಸುವುದಾಗಿ ಗಟ್ಟಿಯಾಗಿ ಕೂಗಿಕೊಳ್ಳುತ್ತಿದ್ದನು. ಕೆಲವರು ಆ ಕೂಗನ್ನು ಕೇಳಿಸಿಕೊಂಡರು. ಮತ್ತೇ ಕೆಲವರು ಅದು ದೆವ್ವದ ಮಾತೆಂದರು. ಗಂಗಾಧರನು ಸೆರೆಮನೆಯಲ್ಲಿ ತಿಂಡಿ ತೀರ್ಥಗಳಿಲ್ಲದೆ ಇಷ್ಟುಕಾಲ ಹೇಗೆ ಬದುಕಿದ್ದಾನೆ ಎಂಬ ವಿಚಾರ ಕಿವಿಯಿಂದ ಕಿವಿಗೆ ಹರಡಿತು. ಇದೇ ರೀತಿ ತಿಂಗಳು ವರ್ಷಗಳು ಕಳೆದವು ಗಂಗಾಧರನು ಇಲಿಗಳು ತಂದುಕೊಟ್ಟ ಆಹಾರವನ್ನು ತಿನ್ನುತ್ತಿದ್ದುದರಿಂದ, ಅವನ ದೇಹದ ಬಣ್ಣವೇ ಬದಲಾಯಿಸಿ ದೃಢಕಾಯನಾಗಿದ್ದನು, ಈ ರೀತಿ

ಹತ್ತು ವರ್ಷಗಳ ಬಂಧನವು ಜಾತಕದ ಪ್ರಕಾರ ನಡೆದು ಹೋಯಿತು.

ಹತ್ತನೆಯ ವರ್ಷದ ಕೊನೆಯ ದಿನ ಸಾಯಂಕಾಲ ಒಂದು ಹಾವು ರಾಜಕುಮಾರಿ ಮಲಗುವ ಮನೆಗೆ ಹೋಗಿ ಅವಳನ್ನು ಕಚ್ಚಿತು. ಕೂಡಲೇ ಅವಳು ಸತ್ತುಹೋದಳು. ರಾಜನಿಗೆ ಅವಳೊಬ್ಬಳೇ ಮಗಳು. ಅವಳನ್ನು ಬಿಟ್ಟು ಬೇರೆ ಗಂಡು, ಹೆಣ್ಣು ಮಕ್ಕಳಾಗಲೀ ಆ ರಾಜನಿಗಿರಲಿಲ್ಲ. ರಾಜನ ಮುಂದಿನ ಜೀವಮಾನವೆಲ್ಲಾ ಅವನ ಮಗಳನ್ನೇ ಅವಲಂಬಿಸಿತ್ತು. ಈಗ ಅವಳೂ ಹಾವಿನ ಕಡಿತದಿಂದ ಸತ್ತು ಹೋದಳು. ರಾಜನು ಕೂಡಲೇ ವಿಷವೈದ್ಯರಿಗೆ ಹೇಳಿ ಕಳುಹಿಸಿದನು. ಅವಳನ್ನು ಬದುಕಿಸಿದವನಿಗೆ ಅರ್ಧರಾಜ್ಯವನ್ನೂ, ಅವಳನ್ನೂ ಸಹ ಅವರಿಗೇ ಕೊಟ್ಟು ಮದುವೆ ಮಾಡುವುದಾಗಿ ಡಂಗುರ ಹೊಡೆಯಿಸಿದನು. ಸೆರೆಮನೆ ಕಾವಲುಗಾರ ಗಂಗಾಧರನು ಯಾವಾಗಲೂ ಕೂಗಿಕೊಳ್ಳುತ್ತಿದ್ದುದನ್ನು ರಾಜನಿಗೆ ತಿಳಿಸಿದನು. ರಾಜನು ಬಂದು ಸೆರೆಮನೆಯನ್ನು ಪರೀಕ್ಷಿಸಿದನು. ಗಂಗಾಧರನೊಬ್ಬನೇ ಸೆರೆಮನೆಯಲ್ಲಿ ಕುಳಿತಿದ್ದನು. ಅವನೊಬ್ಬನೇ ಅನ್ನ ವಿಲ್ಲದೆ ಇಷ್ಟು ಕಾಲ ಹೇಗೆ ಜೀವಿಸಿದ್ದ ? ಕೆಲವರು ಅವನು ದೈವಾಂಶದಿಂದ ಕೂಡಿರಬೇಕೆಂದು ಗುಜುಗುಟ್ಟಿದರು. ಮತ್ತೆ ಕೆಲವರು ಅವನು ರಾಜಕುಮಾರಿಯ ಪ್ರಾಣವನ್ನು ಉಳಿಸಿ ಅವಳನ್ನು ಮದುವೆಯಾಗುವನೆಂದು ಹೇಳಿಕೊಂಡರು. ಇದನ್ನು ಕೇಳಿದ ರಾಜನು ಗಂಗಾಧರನನ್ನು ಬರ ಮಾಡಿಕೊಂಡನು.

ಗಂಗಾಧರನನ್ನು ನೋಡಿದ ಕೂಡಲೇ ಮೂರ್ಛೆ ಹೋದನು. ಅವನ ಮೈಕಟ್ಟನ್ನೂ ಕಾಂತಿಯನ್ನೂ ನೋಡಿ ಬೆರಗಾದನು. ಹತ್ತು ವರ್ಷಗಳ ಸೆರೆಮನೆವಾಸವು ಯಾವ ಗಂಡಸರಿಗೂ ಇಲ್ಲದ ಹೊಸಕಾಂತಿಯನ್ನು ಗಂಗಾಧರನಿಗೆ ಉಂಟುಮಾಡಿದ್ದಿತು. ಅವನ ಮುಖವನ್ನು ನೋಡಲು, ಅವನ ತಲೆಕೂದಲನ್ನು ಮೊದಲು ತೆಗೆಸಬೇಕಾಗಿತ್ತು. ತಾನು ಮಾಡಿದ ಅವಿವೇಕಕ್ಕಾಗಿ ರಾಜನು ಅವನ ಕ್ಷಮೆಯನ್ನು ಕೇಳಿ ತನ್ನ ಮಗಳ ಪ್ರಾಣವನ್ನು ಉಳಿಸಿಕೊಡುವಂತೆ ಬೇಡಿಕೊಂಡನು. ಇದುವರೆಗೂ ಈ ರಾಜ್ಯದಲ್ಲಿ ಸತ್ತ ಹೆಣಗಳನ್ನೂ, ದನಕರುಗಳನ್ನೂ ಈ ಕ್ಷಣದಲ್ಲಿ ಇಲ್ಲಿಗೆ ತೆಗೆದುಕೊಂಡು ಬನ್ನಿ. ನಾನು ಕೂಡಲೆ ಅವುಗಳನ್ನು ಬದುಕಿಸುತ್ತೇನೆ ಎಂದು ಗಂಗಾಧರನು ಹೇಳಿದನು. ಸ್ವಲ್ಪಹೊತ್ತು ಅವನು ಕಣ್ಣು ಬಾಯಿ ಮುಚ್ಚಿಕೊಂಡು ತಪಸ್ಸು ಮಾಡುತ್ತಿರುವಂತೆ ಕಾಣಿಸಿಕೊಂಡನು.

ಬಂಡಿಗಳ ತುಂಬಾ ಹೆಣಗಳನ್ನೂ ಆಕ್ಷಣದಿಂದತರುವುದಕ್ಕೆ ಪ್ರಾರಂಭವಾಯಿತು. ಶ್ಮಶಾನದಲ್ಲಿ ಒಂದೆರಡು ದಿನಗಳ ಹಿಂದೆ ಹೂತಿದ್ದ ಹೆಣಗಳನ್ನು ತೆಗೆದುಕೊಂಡು ಬಂದರು. ಎಲ್ಲಾ ಹೆಣಗಳು ಬಂದು ಸೇರಿದ ಮೇಲೆ, ಗಂಗಾಧರನು ಬಂದು ಪಾತ್ರೆಯಲ್ಲಿ ನೀರನ್ನು ತೆಗೆದುಕೊಂಡು ಹಾವುಗಳ ರಾಜನನ್ನೂ, ಹುಲಿಗಳ ರಾಜನನ್ನೂ ನೆನಸಿಕೊಂಡು ಆ ಸತ್ತ ಹೆಣಗಳ ಮೇಲೆ ಚಿಮುಕಿಸಿದನು. ಸತ್ತು ಬಿದ್ದಿದ್ದವರೆಲ್ಲರೂ ನಿದ್ರೆಯಿಂದೆದ್ದವರಂತೆ ಎದ್ದು ತಮ್ಮ ತಮ್ಮ ಮನೆಗಳಿಗೆ ಹೋದರು. ರಾಜಕುಮಾರಿಗೂ ಪ್ರಾಣಬಂದಿತು. ರಾಜನಿಗೆ ವಿಶೇಷ ಸಂತೋಷ ಉಂಟಾಯಿತು. ಇದೆಲ್ಲಾ ನೋಡಿದ ರಾಜನು ತಾನು ವಿಚಾರ ಮಾಡದೆ ಮಾಡಿದಕೆಲಸಕ್ಕಾಗಿ ತನ್ನನ್ನೇ ನಿಂದಿಸಿಕೊಂಡು ರಾಜಕುಮಾರಿಯನ್ನು, ಅರ್ಧರಾಜ್ಯಕ್ಕೆ ಬದಲಾಗಿ ಪೂರ್ತಿ ರಾಜ್ಯವನ್ನು ತೆಗದುಕೊ ಎಂದು ಗಂಗಾಧರನನ್ನು ಕೇಳಿಕೊಂಡನು ಮತ್ತು ಇದುವರೆಗೂ ನಡೆಯುತ್ತಿದ್ದ ತೊಂದರೆಗಳನ್ನು ಪೂರ್ತಿಯಾಗಿ ನಿಲ್ಲಿಸಬೇಕೆಂದು ಬೇಡಿಕೊಂಡನು. ಅದಕ್ಕೆ ಗಂಗಾಧರನು ರಾಜ್ಯದ ಹತ್ತಿರದಲ್ಲೇ ಇದ್ದ ಕಾಡಿನಲ್ಲಿ ರಾಜ್ಯದ ಜನಗಳೆಲ್ಲರೂ ಸೇರುವಂತೆ ಏರ್ಪಾಟು ಮಾಡಬೇಕೆಂದು ಹೇಳಿದನು. ಅಲ್ಲಿ ತಾನು ಹುಲಿಗಳನ್ನೂ ಹಾವುಗಳನ್ನೂ ಬರಮಾಡಿಕೊಂಡು ಅವಕ್ಕೆಲ್ಲಾ ಆಜ್ಞೆಮಾಡುವುದಾಗಿ ತಿಳಿಸಿದನು. ರಾಜನು ಗಂಗಾಧರನು ಹೇಳಿದಂತೆ ಮಾಡಿದನು. ಸ್ವಲ್ಪ ಕಾಲದಲ್ಲಿಯೇ ಆ ಕಾಡು ಉಜ್ಜೈನಿಯ ಜನರಿಂದ ತುಂಬಿಹೋಯಿತು. ಆ ಬ್ರಾಹ್ಮಣನು ಅದಷ್ಟು ಪ್ರಾಣಿಗಳ ಮೇಲೆ ಅಧಿಕಾರ ಪಡೆದುಕೊಂಡಿದ್ದನು ಎಂಬುದನ್ನು ನೋಡಬೇಕೆಂಬ ಕುತೂಹಲ ಅವರಿಗೆಲ್ಲಾ ಹೆಚ್ಚಾಯಿತು ಅವನು ಮಾನವನಲ್ಲ ಅನ್ನ ನೀರುಗಳಿಲ್ಲದೆ ಹತ್ತು ವರ್ಷಗಳು ಸೆರೆಮನೆಯಲ್ಲಿ ಹೇಗೆ ಬದುಕಿದ್ದ ? ನಿಜವಾಗಿಯೂ ಅವನು ದೇವನೇ

ಆಗಿರಬೇಕು, ಎಂದು ಅಲ್ಲಿ ಸೇರಿದ್ದ ಜನರೆಲ್ಲಾ ಮಾತಾಡಿ ಕೊಂಡರು.

ಆ ಪಟ್ಟಣದ ಜನರೆಲ್ಲಾ ಕಾಡಿನಲ್ಲಿ ಸೇರಿದರು. ಸಂಜೆಯಾಗುತ್ತಲೇ ಗಂಗಾಧರನು ಕ್ಷಣಕಾಲ ಮೌನವಾಗಿ ಕುಳಿತು' ಹುಲಿಗಳ ರಾಜನನ್ನು, ಹಾವುಗಳ ರಾಜನನ್ನು ಮನಸ್ಸಿನಲ್ಲಿ ಧ್ಯಾನಿಸುವನು. ಕೂಡಲೇ ಅವು ತಮ್ಮ ಸೈನ್ಯ ಗಳೊಂದಿಗೆ ಓಡಿಬಂದವು. ಅವುಗಳನ್ನು ನೋಡಿದಕೂಡಲೇ ಜನ ಓಡಿಹೋಗುವುದಕ್ಕೆ ಮೊದಲು ಮಾಡಿದರು. ಗಂಗಾ ಧರನು ಅವರ ಪ್ರಾಣಕ್ಕೆ ಏನೂ ಭಯವಿಲ್ಲವೆಂದು ಸಮಾ ಧಾನ ಮಾಡಿ ನಿಲ್ಲಿಸಿದನು.

ಸಂಜೆಯ ಸೂರ್ಯ ಕಿರಣಗಳು ಗಂಗಾಧರನ ಮೈ ಮೇಲೆ ಹೊಳೆಯುತ್ತಿದ್ದುದರಿಂದಲೂ, ಅವನ ಶರೀರದ ಬಣ್ಣ ದಿಂದಲೂ, ಪವಿತ್ರವಾದ ಬೂದಿಯು ಅವನ ಮೈಮೇಲೆ ತುಂಬಿದ್ದುದರಿಂದಲೂ, ಹುಲಿ, ಹಾವುಗಳು ಅವನ ಬಳಿ ವಿಧೇಯತೆಯಿಂದ ಕುಳಿತಿದ್ದುದರಿಂದಲೂ ನೋಡಿದವರಿಗೆ ಅವನು ಸಾಕ್ಷಾತ್ ದೇವರಂತೆಯೇ ಕಾಣುತ್ತಿದ್ದನು. "ದೇವರಲ್ಲದಿದ್ದರೆ ಹುಲಿಗಳನ್ನೂ ಹಾವುಗಳನ್ನೂ ಹೇಗೆ ತಾನೆ ತನ್ನ ಅಧೀನದಲ್ಲಿಟ್ಟುಕೊಳ್ಳುತ್ತಿದ್ದ" ಎಂದು ಕೆಲ ವರು ಮಾತಾಡಿಕೊಳ್ಳುತ್ತಿದ್ದರು. ಮತ್ತೆ ಕೆಲವರು ಆ ವಿಚಾರಕ್ಕೇನೂ ಗಮನ ಕೊಡಬೇಡಿ; ಅದು ಯಕ್ಷಿಣಿ ಇರಬೇಕು. ಅದೇನೂ ದೊಡ್ಡ ಕೆಲಸವಲ್ಲ. ಅವನು ಬಂಡಿಗಟ್ಟಲೆ ಹೆಣಗಳನ್ನು ಉಳಿಸಿದ್ದು ಅವನನ್ನು 'ಗಂಗಾ ಧರ'ನನ್ನಾಗಿ ಮಾಡಿದೆ ಎಂದು ಹೇಳಿಕೊಳ್ಳುತ್ತಿದ್ದರು. ಅಂತೂ ಈ ನೋಟ ಜನರ ಮನಸ್ಸಿನ ಮೇಲೆ ಹೆಚ್ಚು ಪರಿ ಣಾಮವನ್ನುಂಟುಮಾಡಿತು.

ಗಂಗಾಧರನು ಹುಲಿಗಳನ್ನೂ, ಹಾವುಗಳನ್ನೂ ಕುರಿತು 'ಓ ನನ್ನ ಮಕ್ಕಳೇ ನೀವು ಈ ಉಜ್ಜೈನಿಯ ಜನ ಗಳನ್ನು ಏಕೆ ವೃಥಾ ಹಿಂಸೆ ಮಾಡುತ್ತಿದ್ದೀರಿ ಇನ್ನು ಮುಂದೆ ಈ ಕ್ರೂರ ಕೆಲಸಗಳನ್ನು ನಿಲ್ಲಿಸಿ" ಎಂದು ಹೇಳಿ ದನು. ಅದನ್ನು ಕೇಳಿದ ಹುಲಿಗಳ ರಾಜ, ಈ ಅವಿವೇಕಿ ಯಾದ ರಾಜನು, ನೀವು ಅವನ ತಂದೆಯನ್ನು ಕೊಂದಿ ರೆಂದು ಸುಳ್ಳು ಹೇಳಿದ ಸೊನೆಗಾರನ ಮಾತನ್ನು ಕೇಳಿ ವಿಚಾರಣೆ ಮಾಡದೆ ನಿಮ್ಮನ್ನೇಕೆ ಸೆರೆಮನೆಯಲ್ಲಿಡಬೇಕಾ ಗಿತ್ತು ? ಬೇಟೆಗಾರರೆಲ್ಲರೂ ಹುಲಿಯು ಆ ರಾಜನ ತಂದೆ ಯನ್ನು ಎತ್ತಿಕೊಂಡು ಹೋಯಿತೆಂದು ಹೇಳಿದರು. ನಾನೇ ಅವನನ್ನು ಕೊಂದು ಅವನ ಕಿರೀಟವನ್ನು ನಿಮ ಗೊಪ್ಪಿಸಿದೆ. ರಾಜನು ಯಾವುದನ್ನೂ ವಿಚಾರ ಮಾಡದೆ ನಿಮ್ಮನ್ನೇಕೆ ಸೆರೆಯಲ್ಲಿಡಬೇಕಾಗಿತ್ತು ? ನಾವು ಇಂತಹ ಅವಿವೇಕಿಯಾದ ರಾಜನಿಂದ ನ್ಯಾಯವನ್ನು ಹೇಗೆ ಪಡೆ ಯಲಾಗುವುದು ! ಅವನು ಇನ್ನುಮುಂದೆ ನ್ಯಾಯ ವನ್ನು ಸರಿಯಾಗಿ ನಡೆಸಿಕೊಂಡು ಬರದಿದ್ದರೆ, ನಾವು ನಮ್ಮ ಕೊಲೆಯ ಕೆಲಸವನ್ನು ಮುಂದುವರಿಸುತ್ತೇವೆ ಎಂದಿತು.

ರಾಜನು ಹುಲಿಯು ಹೇಳಿದುದನ್ನು ಕೇಳಿ, ತಾನು ಮಾಡಿದ ಅವಿವೇಕಕ್ಕಾಗಿ ಪಶ್ಚಾತ್ತಾಪಪಟ್ಟು, ಕಣ್ಣೀರು ಸುರಿಸಿ, ಗಂಗಾಧರನನ್ನು ಕ್ಷಮಿಸುವಂತೆ ಕೇಳಿಕೊಂಡನು. ಮತ್ತು ಇನ್ನು ಮೇಲೆ ನ್ಯಾಯವಾದ ರಾಜ್ಯಭಾರ ನಡೆಸ ವುದಾಗಿ ಮಾತುಕೊಟ್ಟನು. ಇದನ್ನು ಕೇಳಿದ ಹುಲಿಯೂ ಹಾವೂ ರಾಜನು ನ್ಯಾಯದಿಂದಿರುವವರೆಗೂ ತಾವು ಯಾವ ವಿಧವಾದ ತೊಂದರೆಯನ್ನುಂಟುಮಾಡುವುದಿಲ್ಲ ವೆಂದು ಹೇಳಿ ಹೊರಟು ಹೋದವು. ಇದನ್ನೆಲ್ಲಾ ಕೇಳಿದ ಅಕ್ಕಸಾಲಿಗನು ತನ್ನ ಪ್ರಾಣವನ್ನು ಉಳಿಸಿಕೊಳ್ಳಲು ಓಡಿದನು. ರಾಜಭಟರು ಅವನನ್ನು ಹಿಡಿದುಕೊಂಡು ಬಂದರು. ಆದರೆ ಗಂಗಾಧರ ಅವನನ್ನು ಕ್ಷಮಿಸಿಬಿಟ್ಟನು. ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿದರು.

ತನ್ನ ಮಗಳ ಪ್ರಾಣವನ್ನುಳಿಸಿದುದಕ್ಕಾಗಿ ಅವ ಳನ್ನು ಮದುವೆಮಾಡಿಕೊಳ್ಳುವಂತೆ ರಾಜನು ಗಂಗಾಧರ ನನ್ನು ಒತ್ತಾಯಪಡಿಸಿದನು. ಅದಕ್ಕೆ ಅವನು ಮೊದಲು ತನ್ನ ಅಣ್ಣನನ್ನು ನೋಡಿಕೊಂಡು ಬಂದು ಆಮೇಲೆ ರಾಜ ಕುಮಾರಿಯನ್ನು ಮದುವೆಯಾಗುವುದಾಗಿ ಹೇಳಿದನು. ರಾಜನು ಅದಕ್ಕೆ ಒಪ್ಪಿಕೊಂಡನು. ಗಂಗಾಧರನು ಅಣ್ಣ ನನ್ನು ನೋಡಲು ಆ ದಿನವೇ ಅಲ್ಲಿಂದ ಹೊರಟನು.

ಅವನು ಆಕಸ್ಮಿಕವಾಗಿ ಬೇರೆದಾರಿಯಲ್ಲಿ ಹೊರಟು, ಸಮುದ್ರತೀರವನ್ನು ಸೇರಬೇಕಾಗಿಬಂತು. ಅವನ ಅಣ್ಣನೂ ಕಾಶಿಗೆ ಹೋಗಲು ಅದೇ ದಾರಿಯಲ್ಲಿ ಬರುತ್ತಿದ್ದನು. ದೂರದಿಂದಲೇ ಅವರು ಒಬ್ಬರನ್ನೊಬ್ಬರು ತಬ್ಬಿಕೊಂಡರು; ನೋಡಿ ಗುರುತು ಹಿಡಿದರು. ಕ್ಷಣಕಾಲ ಅವರಿಗೆ ಏನುಮಾತನಾಡಬೇಕೆಂಬುದೇ ತೋರಲಿಲ್ಲ. ಗಂಗಾಧರನ ಆನಂದಕ್ಕೆ ಎಲ್ಲೆ ಇಲ್ಲದಂತಾಯಿತು. ಆ ಮಿತಿಮೀರಿದ ಸಂತೋಷದಿಂದಲೇ ಸತ್ತು ಹೋದನು.

ಗಂಗಾಧರನ ಅಣ್ಣನಿಗೆ ವಿಪರೀತ ಸಂಕಟವಾಯಿತು. ಅವನು ತಮ್ಮನ ಮೃತದೇಹವನ್ನು ನೋಡಿ ಪುನಃ ಪ್ರಾಣ ಬರಲಾರದೆಂದು ತೀರ್ಮಾನಿಸಿಕೊಂಡನು. ತನ್ನ ತಮ್ಮನು ಇದುವರೆಗೂ ಎಲ್ಲಿದ್ದ, ಏನೇನು ಕೆಲಸಗಳನ್ನು ಮಾಡಿದ ಎಂಬುದನ್ನಾದರೂ ಕೇಳುವುದಕ್ಕೆ ಅವಕಾಶವಿಲ್ಲವಾಯಿತು ತಮ್ಮನ ಹೆಣವನ್ನು ಒಂದು ಮರದ ಕೆಳಕ್ಕೆ ತೆಗೆದುಕೊಂಡು ಹೋಗಿ ಕಣ್ಣೀರು ಸುರಿಸಿದನು. ಗಂಗಾಧರನು ಮತ್ತೆ ಬದುಕುವ ಗುರುತುಗಳಾವುವೂ ಕಂಡು ಬರಲಿಲ್ಲ.

ಗಂಗಾಧರನ ಅಣ್ಣ ಗಣಪತಿಯ ಪರಮಭಕ್ತ. ಅಂದು ಶುಕ್ರವಾರವಾದ್ದರಿಂದ ಆದಿನ ಗಣಪತಿಯ ಪೂಜೆಗೆ ಶ್ರೇಷ್ಠವಾಗಿತ್ತು. ಅವನು ಗಂಗಾಧರನ ಸತ್ತ ದೇಹವನ್ನು ಹತ್ತಿರದಲ್ಲೇ ಇದ್ದ ಗಣಪತಿದೇವಸ್ಥಾನಕ್ಕೆ ತೆಗೆದುಕೊಂಡು ಹೋಗಿ, ಗಣಪತಿಯನ್ನು ಪ್ರಾರ್ಥಿಸಿದನು. ಗಣಪತಿ ಪ್ರತ್ಯಕ್ಷನಾಗಿ ಏನುಬೇಕೆಂದು ಕೇಳಿದನು. ಅದಕ್ಕೆ ಅವನು "ನನ್ನ ತಮ್ಮ ಸತ್ತು ಹೋಗಿದ್ದಾನೆ. ಇದು ಅವನ ದೇಹ ನಾನು ನಿಮ್ಮ ಪೂಜೆಯನ್ನು ಮುಗಿಸುವವರೆಗೂ ಈ ಹೆಣವನ್ನು ನಿಮ್ಮ ವಶದಲ್ಲಿಟ್ಟುಕೊಂಡಿರಬೇಕು. ನಾನು ಈ ಹೆಣವನ್ನು ಇನ್ನೆಲ್ಲಿಯಾದರೂ ಇಟ್ಟರೆ ಪೂಜಮಾಡುವಾಗ ದೆವ್ವಗಳು ಎಳೆದುಕೊಂಡು ಹೋಗಬಹುದು. ನಿಮ್ಮ ಪೂಜೆಯನ್ನು ಮುಗಿಸಿದ ಮೇಲೆ ನಾನು ಅದನ್ನು ಸುಟ್ಟು ಹಾಕುವೆನು" ಎಂದು ಹೇಳಿ ಆ ಹೆಣವನ್ನು ಗಣಪತಿಯ ವಶಕ್ಕೆ ಕೊಟ್ಟು, ಪೂಜೆಗೆ ಸಿದ್ಧ ಮಾಡಿಕೊಳ್ಳಲು ಹೋದನು. ಗಣಪತಿಯು ತನ್ನ ಗಣಗಳಿಗೆ ಆ ಹೆಣವನ್ನು ಎಚ್ಚರಿಕೆಯಿಂದ ನೋಡಿಕೊಂಡಿರಬೇಕೆಂದು ತಿಳಿಸಿದನು.

ತಂದೆಯು ಮಕ್ಕಳ ಕೈಗೆ ಹಣ್ಣನ್ನು ಕೊಟ್ಟು ಜೋಪಾನವಾಗಿಟ್ಟುಕೊಂಡಿರಿ ಎಂದು ಹೇಳುವಂತೆ, ಗಣಪತಿಯು ಹೆಣವನ್ನು ತನ್ನ ಗಣಗಳಿಗೆ ಜೋಪಾನವಾಗಿಟ್ಟುಕೊಂಡಿರುವಂತೆ ಹೇಳಿಕೊಟ್ಟನು. ತಂದೆಯು ಹೆದರಿಕೆಗೆ ಜಗ್ಗದೆ ಮಕ್ಕಳು ಹಣ್ಣಿನ ರುಚಿಯನ್ನು ಕಂಡು ಅದನ್ನು ಪೂರ್ತಿಯಾಗಿ ತಿಂದುಬಿಡುವಂತೆ ಈ ಗಣಗಳೂ ಕೂಡ ಆ ಹೆಣದ ರುಚಿಯನ್ನು ನೋಡಿ, ಅದನ್ನು ಪೂರ್ತಿಯಾಗಿ ತಿಂದು ಬಿಟ್ಟವು. ತಿಂದುಬಿಟ್ಟಮೇಲೆ ತಮ್ಮ ಒಡೆಯನಾದ ಗಣಪತಿಗೆ ಯಾವ ಸಮಾಧಾನವನ್ನು ಹೇಳಬೇಕೆಂದು ತಮ್ಮಲ್ಲೇ ಆಲೋಚಿಸಿಕೊಳ್ಳುತ್ತಿದ್ದವು.

ಗಂಗಾಧರನ ಅಣ್ಣನು ಪೂಜೆಯನ್ನು ಮುಗಿಸಿಕೊಂಡು ಬಂದು ತಮ್ಮನ ಹೆಣವನ್ನು ಕೊಡುವಂತೆ ಕೇಳಿದನು. ಗಣಪತಿ ತನ್ನ ಗಣಗಳನ್ನು ಕರೆದನು. ಅವು ಹೆದರಿಕೊಂಡು ಬಂದು ಮಿಕಮಿಕನೆ ಕಣ್ಣು ಬಿಡುತ್ತಾ ಗಣಪತಿಯ ಮುಂದೆ ನಿಂತವು. ಇದನ್ನು ಕಂಡ ಗಣಪತಿಗೆ ಕೋಪ ಬಂದಿತು. ಗಂಗಾಧರನ ಅಣ್ಣನಿಗೂ ಮಿತಿ ಮೀರಿದ ಸಿಟ್ಟು ಬಂದು "ನಾನು ನಿನ್ನಲ್ಲಿ ದೃಢವಾದ ಭಕ್ತಿಯನ್ನಿಟ್ಟುಕೊಂಡಿಲ್ಲಾ ಇದಕ್ಕೇನೆ? ನನ್ನ ತಮ್ಮನ ಹೆಣವನ್ನು ಹಿಂದಕ್ಕೆ ಕೊಡಲು ನಿನಗೆ ಶಕ್ತಿಯಿಲ್ಲವೆ?" ಎಂದು ಗಣಪತಿಯನ್ನು ಕೇಳಿ ಬಿಟ್ಟನು. ಈ ಮಾತನ್ನು ಕೇಳಿದ ಗಣಪತಿಯು ತನ್ನನ್ನೇ ನಂಬಿಕೊಂಡಿದ್ದವನಿಗೆ ಒದಗಿದ ಕಷ್ಟವನ್ನು ಕಂಡು ವಿಶೇಷವಾಗಿ ನೊಂದುಕೊಂಡನು. ಕೂಡಲೇ ತನ್ನ ದೈವಶಕ್ತಿಯಿಂದ ಸತ್ತ ಗಂಗಾಧರನಿಗೆ ಬದಲಾಗಿ ಬದುಕಿದ ಗಂಗಾಧರನನ್ನೇ ಕೊಟ್ಟನು. ಈ ರೀತಿಯಾಗಿ ಆಜ್ಯೋತಿಷಿಯ ಕಿರಿಯ ಮಗನಿಗೆ ಜೀವ ಬಂದಿತು.

ಅಣ್ಣ ತಮ್ಮಂದಿರು ಬಹಳ ಹೊತ್ತಿನವರೆಗೆ ತಾವು ಮಾಡಿದ ಸಾಹಸಕಾರ್ಯಗಳನ್ನು ಹೇಳಿಕೊಂಡರು. ಆಮೇಲೆ ಇಬ್ಬರೂ ಉಜ್ಜೈನಿಗೆ ಹೋದರು. ಗಂಗಾಧರನು ರಾಜಕುಮಾರಿಯನ್ನು ಮದುವೆಯಾಗಿ ರಾಜ್ಯಭಾರವನ್ನು ವಹಿಸಿಕೊಂಡನು. ಅಣ್ಣ ತಮ್ಮಂದಿರಿಬ್ಬರೂ ಒಬ್ಬರೊಬ್ಬರಿಗೆ ಸಹಾಯ ಮಾಡಿಕೊಂಡು ಬಹಳ ಕಾಲ ರಾಜ್ಯಭಾರ ಮಾಡಿಕೊಂಡಿದ್ದರು. ಗಂಗಾಧರನು ತನ್ನ ತಂದೆ ಬರೆದಿಟ್ಟ ಜಾತಕವನ್ನು ಅರ್ಥ ಮಾಡಿಕೊಳ್ಳಲು ಜೋಯಿಸರ ಸಭೆ

ಸೇರಿದನು. ಸಾವಿರಾರು ಜೋಯಿಸರು ಸಾವಿರಾರು ರೀತಿ ಸೂಚಿಸಿದರು. ಆದರೆ ಗಂಗಾಧರನಿಗೆ ಅವೊಂದೂ ಸರಿಕಾಣ ಲಿಲ್ಲ. ಕೊನೆಗೆ ಒಬ್ಬ ಜ್ಯೋತಿಷಿಯು ಈ ಸಮಸ್ಯೆಯನ್ನು ಜಾತಕ ಓದುವುದರಲ್ಲಿ ಸ್ವಲ್ಪ ವ್ಯತ್ಯಾಸಮಾಡಿ 'ಸಮುದ್ರ ತೀರದಲ್ಲಿ ಸ್ವಲ್ಪಹೊತ್ತು ಮರಣ ಆಮೇಲೆ ಭೋಗ ಪ್ರಾಪ್ತಿ' ಎಂದು ಓದಿಸಿದನು. ಇದನ್ನು ಕೇಳಿದ ಗಂಗಾಧರನು 'ನನ್ನ ತಂದೆಯು ಬರೆದಿಟ್ಟ ಜಾತಕ ಎಂದಿಗೂ ಸುಳ್ಳಾಗ ಲಿಲ್ಲ' ಎಂದು ಹೇಳಿಕೊಂಡನು. ಆ ಮೂರು ಪ್ರಾಣಿಗಳೂ (ಹುಲಿ, ಹಾವು, ಇಲಿ) ಜ್ಯೋತಿಷಿಯ ಮಗನೂ ಉಜ್ಜೈನಿಯ ರಾಜನೂ ಆಗಿದ್ದ ಗಂಗಾಧರನ ಬಳಿಗೆ ಆಗಾಗ್ಗೆ ಬರುತ್ತಿದ್ದವು. ಗಂಗಾಧರನಿಗೆ ಮೋಸ ಮಾಡಿದ್ದ ಸೋನೆಗಾರನೂ ಅರಮನೆಗೆ ಬಂದು ರಾಜನಿಂದ ಬಹುಮಾನಗಳನ್ನು ಪಡೆಯುತ್ತಿದ್ದನು.



## ಓ ! ಗಡಿನಾಡಯೋಧ !!

ಓ ಗಡಿನಾಡ ಯೋಧ ! ನೀನು ಪ್ರಳಯರೂಪಿ !!
ನೀ ನೀಗ ತೋರು ತಾಯ್ನೆಲಕೆ ನಿನ್ನ ಶಕ್ತಿ
ನರನರದ ಒಳಗು ತೆರೆತೆರೆದು ಬರಲಿ
ಉತ್ಸಾಹ ಶಕ್ತಿ ||೧||

ನ್ಯಾಯ ಅನ್ಯಾಯಗಳ ತೋರೆದು
ನೀನಾಗು ರಣಕೆ ಚಂಡಿ ।
ಗಡಿನಾಡ ಸುತ್ತ ಮುತ್ತಿಗೆಯ ಹಾಕಿ
ತೋರೀಗ ನಿನ್ನ ಶಕ್ತಿ ||೩||

ಧಮ ಧಮನಿಯಲ್ಲಿ ಧುಮುಕಿ ಬರಲಿ
ನಿನಗೆ ರಣ ಶಕ್ತಿ ಉಕ್ಕಿ
ದುರ್ಜನರ ದುರ್ನಡತೆ ದುರ್ಭಾವ ದ್ವೇಷಗಳ
ದಹಿಸು ಉರಿದುರಿದು ಉಕ್ಕಿ ||೨||

"ಎಂದೆಂದು ನಾವೇ ಗೆಲ್ಲುವೆವು" ಎಂಬ
ಹೊಸತನದ ಹಾಡ ಎದೆಯೆತ್ತಿ ಹಾಡು ಅಲ್ಲೀ ।
ನಡೆ ಮುಂದೆ ಕತ್ತೆತ್ತಿನಡೆ; ಮುಂದೆ ಎದೆಯೆತ್ತೀ;
ಸಮರದಾ ಸಗ್ಗಕ್ಕೆ ನೀ ||೪||

ನಿನ್ನೆದೆಯಲಿರಲಿ ಅನವರತ
"ಜನನೀ ಜನ್ಮ ಭೂಮಿ ಶ್ಚ
ಸ್ವರ್ಗಾದಪಿ ಗರೀಯಸೀ" ಎಂಬುಕ್ತೀ ||೫||

—ಕೋರಂಬ



# "ಎಳ್ಳು ಬೆಲ್ಲ"

## ಮಕರ ಸಂಕ್ರಮಣದ ಅಮರ ಸಂದೇಶ

—ಚನ್ನಪ್ಪ ಎರೇಸೀಮೆ

ಉತ್ತರಾಯಣ ಪುಣ್ಯಕಾಲ ಸಮೀಪಿಸುತ್ತಿದ್ದಂತೆಯೇ ಎಳ್ಳಿಗೊಂದು ಅಪೂರ್ವ ಗೌರವ. ಅದು ವಿವಿಧ ವರ್ಣದ ಆಕಾರದ ಸಕ್ಕರೆಯ ಅಚ್ಚುಗಳಲ್ಲಿ ವಿರಾಜಮಾನವಾಗಿ ಎಲ್ಲರ ಆದರಕ್ಕೂ ಪಾತ್ರವಾದ ಧಾನ್ಯವಾಗುತ್ತದೆ. ಅದು ಸಕ್ಕರೆಯೊಡನೆ ಸೇರಿ ನಾಗರಿಕ ಯೋಗ್ಯ ವಿವಿಧ ರೂಪ-ಲಾವಣ್ಯ-ವರ್ಣವಿನ್ಯಾಸ ಪಡೆದರೂ "ಎಳ್ಳು ಬೆಲ್ಲ" ಎಂಬ ಹೆಸರನ್ನು ಸೋಲಿಸಲಾಗಲಿಲ್ಲ. ಎಳ್ಳುಬೆಲ್ಲ, ತಿಂದು ಒಳ್ಳೊಳ್ಳೆ ಮಾತಾಡು ಅಂದರಲ್ಲದೆ ಎಳ್ಳು ಸಕ್ಕರೆ ತಿಂದು ಒಳ್ಳೊಳ್ಳೆ ಮಾತಾಡು ಎನ್ನಲಿಲ್ಲ.

ಬಹುಶಃ ಭಾರತದಲ್ಲಿ ಅಥವಾ ಕರ್ನಾಟಕದಲ್ಲಿ ಎಳ್ಳಿನ ಮಹತ್ತು ಬೃಹತ್ತುಗಳನ್ನು ಹೋಲುವ ಸೋಲಿಸುವ ಇನ್ನೊಂದು ಧಾನ್ಯ ಹುಟ್ಟಿಲ್ಲ. ಕನ್ನಡದಲ್ಲಿ ಎಷ್ಟೋ ಧಾನ್ಯಗಳ ಹೆಸರು ಎಷ್ಟೆ ಮೃದುವಾದರೂ, ಶ್ರುತಿ ಸಹ್ಯವಾದರೂ, ಲಲಿತಮಧುರವಾದರೂ, ಸಂಕ್ಷೇಪವಾದರೂ ಅವಾವುವೂ ಎಳ್ಳಿನಷ್ಟು ಸಾಮಾಜಿಕ ಕ್ಷೇತ್ರದಲ್ಲಿ, ಧಾರ್ಮಿಕ ಕ್ಷೇತ್ರದಲ್ಲಿ, ಆರೋಗ್ಯ ಕ್ಷೇತ್ರದಲ್ಲಿ ಪ್ರಾಧಾನ್ಯತೆ ಪಡೆಯಲಿಲ್ಲ. 'ರಾಗಿ' ಈ ಹೆಸರೆಷ್ಟು ಮೃದು ! ಅದರಿಂದ ಮಾಡಿದ ಅಡಿಗೆಗಳೆಷ್ಟುವಿಧ! ಎಷ್ಟು ರುಚಿ! ಈ ಧಾನ್ಯದ ಮಹತ್ವವನ್ನರಿತೇ ಕನಕದಾಸರು 'ರಾಮಧಾನ್ಯ'ವೆಂದು ಹೆಸರಿಸಿ ಅದರ ಮೇಲೊಂದು ಕಾವ್ಯವನ್ನೇ ಬರೆದರು. 'ರಾಘವ' ಎಂಬುದೇ ಸವೆದು 'ರಾಗಿ' ಆಯಿತೆಂದು ಪ್ರಚಾರಮಾಡಿದರು ಏನೇ ಆದರೂ ಎಳ್ಳಿನ ಮಹತ್ವ ಕಡಿಮೆಯಾಗಲಿಲ್ಲ. ಇನ್ನಾವ ಧಾನ್ಯಗಳೂ ಅದರ ಘನತೆಗೌರವಗಳನ್ನು ಹಿಂದೆ ಹಾಕಲಾಗಲಿಲ್ಲ.

### ಎಳ್ಳಿನ ತಿಂಡಿಗಳೆಷ್ಟು ರುಚಿ

ಕೆಲವು ದೇವರಿಗೆ ಎಳ್ಳಿನ ಚಿಗಳಿ ಇಲ್ಲದಿದ್ದರೆ ಯಾವ ವರವನ್ನೂ ಕೊಡವು. ಕರ್ನಾಟಕ ಪ್ರಸಿದ್ಧ ತಿಂಡಿಯಾದ ಕರುಚಿಕಾಯಿ (ಕರಜಿಕಾಯಿ)ಗೆ ಎಳ್ಳು ಪ್ರಮುಖ ಧಾನ್ಯ. ಚಕ್ಕುಲಿ, ಕೋಡಬಳೆ, ಮುಂಡಿಗೆಗಳಿಗೆ ಎಳ್ಳು ಮುಖ್ಯವಾಗಿ ಬೇಕೇಬೇಕು. ಎಳ್ಳುಹಚ್ಚಿ ಮಾಡಿದ ಸಜ್ಜೆರೊಟ್ಟಿ, ಎಳ್ಳುಪುಡಿ ಹಾಕಿ ಮಾಡಿದ ಬದನೇಕಾಯಿ ಇಡಿಗಾಯಿ:, ಹಸಿಯ ಮೆಣಸಿನಕಾಯಿ ಚಟ್ನಿ, ಎಳ್ಳುಹಾಕಿಮಾಡಿದ 'ಎಳ್ಳುಹಿಂಡಿ', ಕೆನೆಮೊಸರು ಇವು ಷಡ್ರಸೋಪೇತ ರಸಿಕ ರಸಾಸ್ವಾದನ ಪರಿಣತ ಮತಿಗಳ ಜಿಹ್ವಾಚಾಪಲ್ಯವನ್ನು ಕೆರಳಿಸುವ ರಸದೌತಣಗಳು. ಎಳ್ಳೆಣ್ಣೆಯಲ್ಲಿ ಮಾಡಿದ ಒಗ್ಗರಣೆಯ ರುಚಿ ಇನ್ನಾವುದಕ್ಕೆ ಬಂದೀತು ? ನಿಜವಾಗಿ ಎಳ್ಳಿನಲ್ಲಿ ದೇಹಕ್ಕೆ ಬೇಕಾಗುವ ಕಬ್ಬಿಣದ ಅಂಶ ಹೆಚ್ಚಾಗಿದೆ. ಅದರಂತೆ ಬೆಲ್ಲದಲ್ಲೂ ಕೂಡ. ಆದ್ದರಿಂದಲೇ ಎಳ್ಳುಬೆಲ್ಲ ತಿನ್ನಲು ನಮ್ಮವರು ಈ ಹಬ್ಬದಲ್ಲಿ ಆದೇಶ ಮಾಡಿದ್ದಾರೆ.

### ಎಳ್‌ನೆಯ್‌–ಎಣ್ಣೆ, ತಿಲ–ತೈಲ

ಈಗ ಪ್ರಚಲಿತದಲ್ಲಿರುವ ಎಲ್ಲ 'ಎಣ್ಣೆ' ಎಂಬುವಕ್ಕೆಲ್ಲ ಎಳ್ಳೇ ತಾಯಿ. 'ಎಣ್ಣೆ' ಆಗಿರುವುದು ಎಳ್‌ನೆಯ್‌, ಎಂಬುದರಿಂದ ಎಳ್‌ನೆಯ್‌--ಎಣ್ನೆ-ಎಣ್ಣೆ--ಆಗಿದೆ. ಇದೇ ಇದರ ವ್ಯುತ್ಪತ್ತಿ. ಬೆಳ್‌ನೆಯ್--ಬೆಣ್ನೆ-- ಬೆಣ್ಣೆ ಆದಹಾಗೆ ಈಗ ಕಡಲೇಕಾಯಿಎಣ್ಣೆ, ಹರಳೆಣ್ಣೆ, ಕೊಬ್ರಿಎಣ್ಣೆ ಇತ್ಯಾದಿ ಹೇಳುವ ಹೆಸರುಗಳಲ್ಲೆಲ್ಲ, ಎಳ್ಳಿನ ನೆಯ್ಯನ್ನೆ ತಾಯಿಯೆಂದು ಭಾವಿಸಬೇಕಲ್ಲವೇ ? ಎಣ್ಣೆ-ಎಣ್ಣೆ ಎಂದು ಹೇಳುವ ವಿವಿಧ ಎಣ್ಣೆಗಳ ಅವಾಂತರದಲ್ಲಿ 'ಎಳ್‌ನೆಯ್' ಎಂಬುದು ಮೂಲೆಯಲ್ಲಿ ಕುಳಿತು ಹೋಗಿದೆ. ಆದರೂ ಅವುಗಳ ಮೇಲೆ ತನ್ನ ಮೌನಮುದ್ರೆಯನ್ನು ಒತ್ತಿಯೇ ಇದೆ. ಅಧಿಕಾರ ಮಾಡಿಯೇ ಇದೆ. ಎಲ್ಲ ಎಣ್ಣೆಗಳಿಗೂ ತನ್ನ ಹೆಸರನ್ನು ಬಿಟ್ಟುಕೊಟ್ಟು "ಮಹದಾನಿ" ಎನಿಸಿದೆ. ಭಾರತೀಯ ಪ್ರಾಚೀನ ಸಾಹಿತ್ಯ ಲೋಕದಲ್ಲಿ ಎಳ್ಳಿನ

ಮಹತ್ವವು ಉಲ್ಲೇಖಿಸಲ್ಪಟ್ಟಿದೆ. ಸಂಸ್ಕೃತದಲ್ಲಿ ಇದಕ್ಕೆ "ತಿಲ"ವೆಂದೂ ಇದರ ಸಂಬಂಧದ ರಸವೇ "ತೈಲ"ವೆಂದೂ ಕರೆಯಲಾಗಿದೆ. ಸಂಸ್ಕೃತದಲ್ಲಿಯೂ ಕನ್ನಡದಂತೆ ಎಲ್ಲ ಎಣ್ಣೆಗಳಿಗೂ "ತೈಲ"ವೆಂಬುದೇ ಪ್ರಸಿದ್ಧವಾಗಿದೆ. ಭೃಂಗಾಮಲಕತೈಲ, ನಾರಾಯಣತೈಲ ಇತ್ಯಾದಿ. ಈ "ತೈಲ" ಶಬ್ದ ತಿಲದಿಂದ ಬಂದುದರಿಂದ ಆ ಭಾಷೆಯು ಎಲ್ಲ ತೈಲಗಳಿಗೂ ತಿಲವನ್ನೇ ತಾಯಿಯೆಂದು ಕರೆಯಬೇಕು. ಹಿಂದುಸ್ಥಾನಿಯವರು "ತೈಲ" ಎಂಬುದನ್ನೇ ಸ್ವಲ್ಪ ಬದಲಾಯಿಸಿಕೊಂಡು ತೇಲ್ ಎಂದು ಕರೆದರು. ಏನೇ ಎಂದರೂ ತಿಲ ಅಥವಾ ಎಳ್ಳು ಎಂಬ ಹೆಸರಿನ ಮೇಲೆ ತೆರಿಯೆಳೆಯಾಗಲಿಲ್ಲ. ಇದರಿಂದ ಎಳ್ಳು ಹೇಗೆ ಎಲ್ಲ ಎಣ್ಣೆ ಪದಾರ್ಥಗಳ ಮೇಲೆ ತನ್ನ ಶಾಶ್ವತ ಮುದ್ರೆಯೊತ್ತಿದೆಯೆಂಬುದನ್ನು ಅರಿಯಬಹುದು.

## ಸಾಹಿತ್ಯಲೋಕದಲ್ಲಿ ಎಳ್ಳು

ಪರಮಾತ್ಮನ ನಿಲವನ್ನು ಸೂಚಿಸುವಾಗ ವಚನಕಾರಳಾದ ಅಕ್ಕಮಹಾದೇವಿ '....ತಿಲದ ಮರೆಯ ತೈಲದಂತೆ........ ಭಾವದ ಮರೆಯ ಬ್ರಹ್ಮವಾಗಿಪ್ಪ ಚೆನ್ನಮಲ್ಲಿಕಾರ್ಜುನನ ನಿಲವನಾರೂ ಅರಿಯಬಾರದು" ಎಂದಿದ್ದಾಳೆ. ....'ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತಾಯಿತ್ತೆನ್ನ ಭಕ್ತಿ" ಎನ್ನುತ್ತಾರೆ ಬಸವಣ್ಣ. 'ತಿಲದ ಮರೆಯ ತೈಲವನ್ನರೆದು ಕಾಂಬ ತೆರನಂತೆ" ಎಂದಿದ್ದಾನೆ ಮೋಳಿಗೆಯ ಮಾರಯ್ಯ ಶರಣ. ಈಶ್ವರನನ್ನು ಕಾಣುವ ಪರಿಯ ವಿಷಯ ಕುರಿತು ಪ್ರಭುದೇವರು 'ಎಳ್ಳಿಂಗೆ ಪರಿಮಳ ಕಟ್ಟದಲ್ಲದೆ ಎಣ್ಣೆಗೆ ಪರಿಮಳವೇಧಿಸದು" ಎಂದಿದ್ದಾರೆ. ಇಂಥ ನೂರಾರು ಸಾವಿರಾರು ಮಾತುಗಳನ್ನು ಎಳ್ಳಿನ ಹೆಸರೆತ್ತಿ ದಾರ್ಶನಿಕರು, ಸಾಹಿತಿಗಳು ಹೇಳಿ ಎಳ್ಳಿನ ಲಾಭ ಪಡೆದಿದ್ದಾರೆ. ಜಾನಪದ ಸಾಹಿತ್ಯ ರಾಶಿಯಲ್ಲಂತೂ ಎಳ್ಳು ಎಳ್ಳು ಹೂವು' ಎಳ್ಳು ಬೆಳೆಯೋ ಭೂಮಿಯ ಬಗ್ಗೆ ಅನೇಕ ಪದ್ಯ ಹಾಡಿದ್ದಾರೆ.

ಎಳ್ಳು ಹೂವಿನ ಸೀರೆ ಬೆಳ್ಳಿ ಕಾಲುಂಗುರ।
ಹಳ್ಳದ ನೀರು ತರುತಾಳೆ
ಹಳ್ಳದನೀರುತರುತಾಳೆ। ನನಗೆಳತಿ।
ಹಳ್ಳಿಗೌಡರ ಹಿರಿಮಗಳು ॥೧॥

ಎಳ್ಳುಹೂವಿನ ಸೀರಿ ಕೊರಳಾಗ ಚಿಂತಾಕು।
ಇರಳು ಬಂದೆತ್ತು ಇಳಿದಾಳು ।
ಇರುಳು ಬಂದೆತ್ತು ಇಳಿದಾಳು ನನಗೆಳತಿ।
ಆರಳಿಲೆಮಗನ ಹೆಸರೇನು ॥೨॥

ಎಳ್ಳು ಬೆಳಿಯೊದು ಸಣ್ಣೀರಿಗೆ ಒಳನಾಡು ।
ಎಳ್ಳು ಬೆಳೆಯೋದು ಕನಕಗಿರಿ
ಎಳ್ಳು ಬೆಳೆಯೋದು ಕನಕಗಿರಿ ರಾಜ್ಯವ।
ಮತ್ತೆ ಸೋತಾನ ದೊರೆಮಗ ॥೩॥

ಏಳುತಾಲೇ ಎದ್ದು ಯಾರ್ಯಾರ ನೆನೆಯಲಿ।
ಎಳ್ಳು ಜೀರಿಗೆ ಬೆಳೆಯೋಳೆ।
ಎಳ್ಳು ಜೀರಿಗೆ ಬೆಳೆಯೋಳ ಭೂಮಿತಾಯಿ।
ಎದ್ದೊಂದುಗಳಿಗೆ ನೆನೆದೇನು ॥೪॥

..."ಎಳ್ಳು ಹೊಲದಾಗಿರುವ ಒಳ್ಳೋಳೆ ಲಕ್ಕಮ್ಮ" ॥೫॥

ಹೀಗೆ ನೂರಾರು ಸಾವಿರಾರು ಪದ್ಯಗಳಲ್ಲಿ ಎಳ್ಳಿನ ಮಹತ್ವವು ಉಕ್ತವಾಗಿದೆ. ಈ ಕವಿಗಳಿಗೆ ಇನ್ನಾವ ಧಾನ್ಯವನ್ನಾದರೂ ಉಪಮಾನಕ್ಕೆ, ರೂಪಕ್ಕೆ ಏಕೆ ಬೇಕಾಗಲಿಲ್ಲವೊ, ಅಂತೂ ಎಳ್ಳನ್ನು ಹೊಗಳಿ ಹೊಗಳಿ ಹೊನ್ನಶೂಲಕ್ಕೇರಿಸಿಬಿಟ್ಟಿದಾರೆ. ಎಳ್ಳಿಗೆ ಈ ಹೊಗಳಿಗೆ ಸಾಕಾಗಿಯೇ ಮೂಲೆ ಸೇರಿಬಹುದೇ ಎನ್ನಿಸುತ್ತದೆ ಒಮ್ಮೊಮ್ಮೆ.

ಎಳ್ಳು ಗಿಡದ ಹೂವಿನ ಬಣ್ಣ ಅತ್ಯಂತ ಮೋಹಕ. ಸೀರೆ ಬಣ್ಣ ಎಳ್ಳು ಹೂವಿನ ಬಣ್ಣವಾದರೆ ನೋಡಲೆಷ್ಟು ಸೊಗಸು ! ಬಟ್ಟೆಗಳ ಬಣ್ಣ ಹೇಳವಲ್ಲಿ ಅಗಸೆ ಹೂವಿನ ಬಣ್ಣ ಸುಳಿಬಾಳೆ ಎಲೆ ಹಸಿರು ಬುಗಡಿ ದಡಿ, ಹಸಿರು ಬಿಲ್ವರ, ಆಕಾಶ ನೀಲಿ ಎಂದು ಹಿಂದಿನವರು ಹೇಳುತ್ತಿದ್ದ ಹೆಸರುಗಳ ಬದಲಿಗೆ ಈಗಿನ ಜನರ ಗ್ರೀನ್, ಎಲ್ಲೋ, ರೆಡ್, ಚಾಕಲೇಟ್ ಕಲರ್ ಎಂಬ ಪರಭಾಷಾ ಶಬ್ದ ಪ್ರಯೋಗ ಸೌಂದರ್ಯವೇನು ಸೊಗಸಾದೀತು ?

## ಗಾದೆಗಳಲ್ಲಿ ಪಡಿಮಾತುಗಳಲ್ಲಿ–ಎಳ್ಳು

ನಿತ್ಯ ನಿತ್ಯ ಜನಜೀವನದ ಭಾಷೆಯ ಬಳಕೆಯಲ್ಲಿ ಎಳ್ಳಿನ ಹೋಲಿಕೆಗೆ ಮಿತಿಯಿಲ್ಲ. "ಎಳ್ಳು ಒಣಗಿದರೆ ಎಣ್ಣೆ ಬಂತು; ನೀ ಒಣಗಿದರೇನು ಬಂತು?" "ಎಳ್ಳು ಕಿತ್ತು ಹುಳ್ಳಿ ಹಾಕಿದಂತೆ" ಎಳ್ಳು ಹಾಕಿದರೆಸಿಡಿಯುವಂಥಾಜ್ವರ" ಇತ್ಯಾದಿ

ಯಾಗಿ ಹೇಳುವುದನ್ನು ಕೇಳಿದ್ದೇವೆ. ಎಳ್ಳಿನಂಥ ಉತ್ತಮ ಧಾನ್ಯದ ಗಿಡ ಕಿತ್ತು ಹುಳ್ಳಿಯನ್ನ ಹಾಕುವವನ ವ್ಯವಸಾಯ ಬುದ್ಧಿಗೆ ಲೋಕ ನಗುತ್ತದೆ. ಜ್ವರದ ಅಳತೆಯಲ್ಲಿ ಎಳ್ಳು ಥರ್ಮಾಮಿಾಟರ್ ನಮ್ಮ ಜನಕ್ಕೆ. ಎಳ್ಳು ಹಾಕಿದರೆ 'ಚಟ್' ಎನ್ನಬೇಕು ಅಂಥ ಜ್ವರ ಎನ್ನುವುದಕ್ಕೆ ಪ್ರತಿಯಾಗಿ 'ಸಾಸಿವೆ' ಯನ್ನು ಇದರ ಅಳತೆಗೆ ಏಕೆ ತೆಗೆದುಕೊಳ್ಳಲಿಲ್ಲವೊ ! ಪರಮಾತ್ಮನು 'ಎಳ್ಳು ಕಾಳು ಮುಳ್ಳು ಮೊನೆ' ಎಲ್ಲೆಲ್ಲೂ ಇದ್ದಾನೆ-ಎನ್ನುತ್ತಾರೆ. ಎಳ್ಳಿಗಿಂತಲೂ ಚಿಕ್ಕ ಗಸಗಸೆಯನ್ನೇಕೆ ಈ ಮಾತಿಗೆ ಬಳಸಲಿಲ್ಲವೊ ಪಾಪ ಎನ್ನಿಸುತ್ತದೆ. ಯಾವುದಾದರೂ ಪದಾರ್ಥ ತನ್ನಲ್ಲಿ ಇಲ್ಲವೇ ಇಲ್ಲ ಎನ್ನುವಾಗ 'ಎಳ್ಳಷ್ಟಿಲ್ಲ' 'ಎಳ್ಳನಿತಿಲ್ಲ' 'ತಿಲಮಾತ್ರವಿಲ್ಲ' ಇತ್ಯಾದಿ ಹೊಸಗನ್ನಡ, ಹಳಗನ್ನಡ, ಸಂಸ್ಕೃತ ಎಲ್ಲೆಲ್ಲೂ ಪ್ರಸಿದ್ಧಿ. ತಿಲಕ್ಕಿಂತ ಇನ್ನೂ ಚಿಕ್ಕ ರಾಗಿ, ಗಸಗಸೆಗಳ ಹೆಸರನ್ನು ಒಮ್ಮೆಯಾದರೂ ಮರೆತು ಯಾರೂ ಬಳಸಲಿಲ್ಲ. ಸಂಸ್ಕೃತದ ಮಹಾ ಮಹಾ ಕವಿಗಳೂ ಕೂಡ ತಿಲಪ್ರಾಯ, ತಿಲಮಾತ್ರ, ತಿಲವತ್, ತಿಲಸದೃಶ,- ಎಂದು ಪದೇ ಪದೇ ಎಳ್ಳಿನ ಖ್ಯಾತಿ ಕೊಂಡಾಡುತ್ತಾರೆ.

ಹಣೆಯ ಮೇಲೆ ಚುಕ್ಕೆ ಇಡುವುದಕ್ಕೆ " ತಿಲಕ " ಎನ್ನುತ್ತಾರೆ. ದೇಹಗತ ಕೃಷ್ಣತಿಲತುಲ್ಯ ಚಿಹ್ನೆಗೆ "ತಿಲಕಾಲಿಕ" ಎನ್ನುತ್ತಾರೆ. ಇನ್ಯಾವ ಕರಿಯಬಣ್ಣದ ವಸ್ತುವು ಅದನ್ನು ಹೆಸರಿಸಲು ಸಿಕ್ಕಲಿಲ್ಲವೇ ? ಸಿಕ್ಕೀತು ! ಆದರೆ ತಿಲದಮೇಲಿನ ಅವರ ಪ್ರೀತಿ ಅನ್ಯತ್ರ ಹೋಲಿಕೆಗೆ ಅವಕಾಶ ಕೊಡಲಿಲ್ಲ. ತೆನ್ನಾಲಿ ರಾಮಕೃಷ್ಣನು ತನ್ನನ್ನು ಸೋಲಿಸಬಂದ ಪ್ರತಿವಾದಿಭಯಂಕರನಿಗೆ ತನ್ನ ಕಂಕುಳಲ್ಲಿನ ಗಂಟನ್ನು "ತಿಲಕಾಷ್ಠಮಹಿಷಬಂಧನವೆಂಬ ಗ್ರಂಥ" ಎಂದನಂತೆ! ಆ ಹೆಸರನ್ನು ಕೇಳಿಯೇ ಪ್ರತಿವಾದಿ ಬೆಪ್ಪಾದನಂತೆ ! ತಿಲಕಾಷ್ಠದ ಬದಲಿಗೆ ಬೇಕಾದಷ್ಟು ಕಾಷ್ಠಗಳು ಇದ್ದರೂ ಎಳ್ಳುಕಡ್ಡಿಗಳನ್ನೇ ಎಮ್ಮೆಕಟ್ಟುವ ಹಗ್ಗದಿಂದ ಬಂಧಿಸಿ ಮೇಲೆ ಬಟ್ಟೆಮುಚ್ಚಿಕೊಂಡು ಆ ಸ್ಥಾನಕ್ಕೆ ಆತ ಬಂದಿದ್ದನಂತೆ.

## ಲಾಕ್ಷಣಿಕರು ಎಳ್ಳಿಗೆ ಕೊಟ್ಟ ಮಹತ್ವ

ಲಾಕ್ಷಣಿಕರು ಮಿಶ್ರಾಲಂಕಾರ ಹೇಳುವಲ್ಲಿ "ತಿಲತಂಡುಲವತ್ ಸಂಸೃಷ್ಟಿಃ" ಎಂದರು. ಎಳ್ಳು ಅಕ್ಕಿಗಳನ್ನು ಬೆರಸಿದಂತೆ ಎರಡು ಅಲಂಕಾರಗಳು ಒಂದೇ ಪದ್ಯದಲ್ಲಿದ್ದರೆ ಅದಕ್ಕೆ ಸಂಸೃಷ್ಟಿ ಎಂದು ಹೆಸರು. ಎಳ್ಳು ಚಿಕ್ಕದು, ಅಕ್ಕಿ ದೊಡ್ಡದು ಆದರೂ ಎಳ್ಳನ್ನೇ ಎತ್ತಿಕೊಂಡರು. ಗೋಧಿ, ಉದ್ದು ಇತ್ಯಾದಿಗಳನ್ನೇಕೆ ಎತ್ತಿಕೊಳ್ಳಲಿಲ್ಲವೋ ಪಾಪ !

ಷೋಡಶಧಾನ್ಯಗಳಲ್ಲಿ ಗೋ--ಭೂಮಿ--ತಿಲ.... ಇಲ್ಲಿ ತಿಲವೇ ಮೂರನೇ ಸ್ಥಾನ ಪಡೆದಿದೆ. ನಿತ್ಯ ನಿತ್ಯ ಎಲ್ಲರ ಅತ್ಯಂತ ಉಪಯೋಗ ವಸ್ತುವಾದ ತಂಡುಲ(ಅಕ್ಕಿ)ಕ್ಕೆ ಈ ಸ್ಥಾನ ಕೊಡಬಾರದಿತ್ತೆ ಪಾಪ! ಎನ್ನಿಸುತ್ತದೆ. ದಶಧಾನ್ಯಗಳಲ್ಲಿ ಎಳ್ಳಿಗೇ ಅಗ್ರಪಟ್ಟ. ನವಧಾನ್ಯಗಳಲ್ಲಿ ಎಳ್ಳಿಗೆ ಪ್ರಾತಿನಿಧ್ಯ,— ಹೀಗೆ ಎಲ್ಲೆಲ್ಲೂ ಎಳ್ಳು ಯಾವ ಧಾನ್ಯಕ್ಕೂ ಇಲ್ಲದ ಮಹತ್ವದ ಸ್ಥಾನವನ್ನಾಕ್ರಮಿಸಿದುದು ಸೋಜಿಗದ ಸಂಗತಿ. ಕರ್ನಾಟಕದಲ್ಲಿ ಕೆಲವರು ಅಚ್ಚಕನ್ನಡದಲ್ಲಿ "ಎಳ್ಳು" ಎಂದು ಕರೆದರೂ ಸಂಸ್ಕೃತಪ್ರಿಯರಾದ ಅನೇಕ ವೃದ್ಧಪಿತಾಮಹರೂ ಅದರ ಮತ್ತು ಅದರ ಸಂಬಂಧದ ಶಬ್ದಗಳನ್ನು ಸಂಸ್ಕೃತ ಭಾಷೆಯಿಂದ ಹೇಳ ಹೊರಟು ತಿಲ, ತಿಲಕ, ತಿಲಮಾತ್ರ, ತಿಲತರ್ಪಣ, ತಿಲೋದಕ, ತಿಲಾಂಜಲಿ, ತಿಲತಂಡುಲವತ್, ತೈಲೀನ, ತಿಲಕಾಲಿಕ, ತಿಲೋಪಮ, ತಿಲಸದೃಶ ಇತ್ಯಾದಿ ಶಬ್ದಗಳಿಂದ ಎಲ್ಲೆಲ್ಲೂ ತಿಲದ (ಎಳ್ಳಿನ) ವಿಜಯ ಪತಾಕೆಯನ್ನು ಹಾರಿಸಿದ್ದಾರೆ, ಕೊಂಡಾಡಿದ್ದಾರೆ, ಹೊಗಳಿದ್ದಾರೆ, ದೃಷ್ಟಾಂತವಿತ್ತಿದ್ದಾರೆ. ಆದ್ದರಿಂದಲೇ ಎಳ್ಳಿಗೆ ತನ್ನ ಮಹತ್ವ ಮನವರಿಕೆಯಾಗಿ ಅತ್ಯುಚ್ಚ ಸ್ಥಾನಕ್ಕೇರಿ ಮೂರು ರೂಪಾಯಿಗೆ ಒಂದು ಕೆ. ಜಿ. ಯಾಗಿ ಕೈಗೆ ಎಟುಕದ ರೀತಿ ಕುಳಿತಿರಬೇಕು.

### ಶ್ರೀ ಕ್ಷೇತ್ರದ ಸೇವೆಗೆ ಸಮಗ್ರ ಜೀವನವನ್ನು ಮುಡುಪಾಗಿಸಿದ್ದ

# ಲಿಂಗೈಕ್ಯ ಗಂಗಾಧರ ದೇವರು

—ಬಿ. ಎಸ್. ಸ್ವಾಮಿ, ಆಕಾಶವಾಣಿ, ಬೆಂಗಳೂರು.

ಈಗಿನ ಕೊಳ್ಳೇಗಾಲ ತಾಲ್ಲೂಕು ಎಂದೊಡನೆ ನಿಜ ಗುಣರು ಮುಪ್ಪಿನಾರ್ಯರು, ಮಾದೇಶ್ವರ, ಸಿದ್ಧೇಶ್ವರರು ಮೊದಲಾದ ಶಿವಶರಣರೂ, ಕವಿಗಳೂ ಉದಿಸಿದ ಬೀಡು, ಎಂದು ತಟ್ಟನೆ ನಮ್ಮ ಮನಸ್ಸಿನ ಮುಂದೆ ಒಂದು ಸದ್ಭಾವ ಮೂಡುವುದು, ಅಂತಹ ಹಿನ್ನೆಲೆಯುಳ್ಳ ತಾಲ್ಲೂಕಿನ ಗುಂಡೇಗಾಲದ ಶ್ರೀ ಭೋಗಪ್ಪ ಶಾಸ್ತ್ರಿಗಳು ಮತ್ತು ಜವ ನಮ್ಮನವರ ಪುತ್ರ ರಾಗಿ 14-3-1905ರಂದು ಶ್ರಿ ಗಂಗಾ ಧರ ಸ್ವಾಮಿಗಳು ಜನಿಸಿದರು. ಭೋಗಪ್ಪ ಶಾಸ್ತ್ರಿಗಳಿಗೆ ಮೂರು ಹೆಣ್ಣುಗಳು ಮತ್ತು ನಾಲ್ಕು ಗಂಡು ಮಕ್ಕಳು ಅದರಲ್ಲಿ ಇವರು ಮೂರನೆಯವರು. ಅಂದು ಗುಂಡೇಗಾಲ ದಲ್ಲಿ ಪ್ರಾಥಮಿಕ ಶಾಲೆಯೇ ಇರಲಿಲ್ಲ. ಆದಕ್ಕಾಗಿ ಪಾಳ್ಯ ಅಥವಾ ಕೊಳ್ಳೆಗಾಲಕ್ಕೆ ಹೋಗಬೇಕಾಗಿತ್ತು. ಆದ್ದರಿಂದ ತಮ್ಮ ಓದನ್ನು ಕುಂತೂರಿನಲ್ಲೇ ನಡೆಸಿದರು. ಇವರು ಕುಂತೂರಿನಲ್ಲಿದ್ದಾಗ ಶಿವಕಥಾ ವಿದ್ವಾಂಸರಾದ ಸಂಗಪ್ಪನ ವರು ಇವರಿಗೆ ಮಿತ್ರರಾಗಿದ್ದರು. ಶ್ರೀಗಳವರ ತಂದೆ ಸಹ ಶಿವಕಥೆಯನ್ನು ಹೇಳುತ್ತಿದ್ದರು. ಆದುದರಿಂದ ಗಂಗಾ ಧರಸ್ವಾಮಿಗಳಿಗೆ ಸಾಹಿತ್ಯದತ್ತ ಒಲವು ಮೂಡಿತು. ಇವರು ಕಲಾವಿದರು, ನಾಟಕ ಪ್ರಿಯರು ಒಟ್ಟಿನಲ್ಲಿ ಹೇಳುವುದಾ ದರೆ ಸಂಗೀತ, ಸಾಹಿತ್ಯ ಕಲಾಪ್ರಿಯ ಮನೋಧರ್ಮ ಇವರದು.

‘ ಇವರ ಮುಂದಿನ ವಿದ್ಯಾಭ್ಯಾಸ ಸಿದ್ಧಗಂಗೆಯಲ್ಲಿ ನಡೆಯಿತು. ಸಿದ್ಧಗಂಗೆ ಅಂದು ವಿದ್ಯಾಕೇಂದ್ರವಾಗಿ ಸಂಸ್ಕೃತ ಜ್ಯೋತಿಷ್ಯ ಕಾವ್ಯ ಭಾಗದ ತರಗತಿಗಳು ನಡೆಯುತ್ತಿ ದ್ದವು. ಅಲ್ಲಿಗೆ ಹೋಗುವ ಮನಸ್ಸು ಇವರದಾಯಿತು. ಇಲ್ಲಿ ಉತ್ತಮ ಜ್ಯೋತಿಷ್ಯ, ಸಂಸ್ಕೃತವನ್ನು ಅಭ್ಯಾಸ ಮಾಡಿದರು. ವಿದ್ಯಾರ್ಥಿ ದಿಸೆಯಲ್ಲಿ ಇವರು ಉತ್ತಮ ವಾಗ್ಮಿಗಳು, ಅನೇಕ ಸಾರಿ ಪಾರಿತೋಷಕಗಳನ್ನು ಸಿದ್ಧ ಗಂಗಾ ಶಾಲೆಗೆ ತಂದಿದ್ದಾರೆ. 14 - 1 - 1925ರಲ್ಲಿ ಇವರು ಸಿದ್ಧಗಂಗೆಗೆ ಸೇರಿದರು.

ಬಾಲ್ಯದಿಂದಲೂ ಮುಗ್ಧ ಭಾವ. ಇದನ್ನು ನೆನೆಸಿ ಕೊಂಡರೆ ಸಿದ್ಧರಾಮನ ದಿವ್ಯನಿಷ್ಠೆ ಜ್ಞಾಪಕಕ್ಕೆ ಬರು ತ್ತದೆ. ಸಂಸಾರದಲ್ಲಿ ಬಳಲಿ ತೊಳಲುತಿದ್ದವರನ್ನು ಕಣ್ಣಾರೆ ಗಮನಿಸಿ ಸಂನ್ಯಾಸತ್ವವನ್ನು ಸ್ವೀಕರಿಸುವುದೇ ಉತ್ತಮ ವೆನಿಸಿತು. ತಂದೆಗೇನೂ ಆಸ್ತಿ ಕಡಿಮೆ ಇರಲಿಲ್ಲ. ಆದರೆ ಎಲ್ಲವನ್ನೂ ತಮ್ಮಂದಿರಿಗೇ ಬಿಟ್ಟು ಸಿದ್ಧಗಂಗೆಯಲ್ಲೇ ನೆಲಸಿ ದರು. ಸದಾ ಸಿದ್ಧಲಿಂಗನ ಪೂಜೆ, ಇಷ್ಟಲಿಂಗದ ಪೂಜೆ ಯಲ್ಲೇ ನಿರತರಾದರು. ಇದನ್ನು ಗಮನಿಸಿದ ಉದ್ಧಾನ ಶಿವಯೋಗಿಗಳು ಸಿದ್ಧಲಿಂಗೇಶ್ವರನ ಪೂಜೆಗೆ ಅವರನ್ನೇ ನೇಮಿಸಿದರು. ಅದಕ್ಕೆ ಸಂತೋಷವಾಗಿ ಒಪ್ಪಿಕೊಂಡು ನಿರ್ವಹಿಸಿಕೊಂಡು ಬಂದರು. ಮರ್‍ಯಾಲದ ಮಹಂತ ಸ್ವಾಮಿಗಳಿಂದ ಇವರು ದೀಕ್ಷೆ, ಮಂತ್ರೋಪದೇಶವನ್ನೂ ಪಡೆದರು. ಸತತವಾಗಿ 40 ವರ್ಷಗಳಿಂದ ಅನುಪಮ ಸೇವೆಯನ್ನು ಸಲ್ಲಿಸಿದರು. ಶ್ರಿ ನಿ|| ಪ್ರ|| ಉದ್ಧಾನ ಸ್ವಾಮಿ ಗಳವರ, ಶ್ರೀ|| ನಿ|ಪ್ರ| ಶಿವಕುಮಾರ ಸ್ವಾಮಿಗಳವರ ದಿವ್ಯ ಸೇವೆಯನ್ನು ಮಾಡಿದರು.

ಮಳೆ ನಕ್ಷತ್ರ ನೋಡಿ ಮಳೆ ಜೋಯಿಸರಂತೆ ಮಳೆ ಬರವುದೋ ಏನೋ ಎಂಬುದನ್ನು ಹೇಳುತ್ತಿದ್ದರು. ಈಗಿನ ಶ್ರಿ ಶ್ರಿ ಶಿವಕುಮಾರ ಸ್ವಾಮಿಗಳೇ ಮಳೆ ಬೆಳೆಗಳ ಬಗೆಗೆ ಅವರನ್ನು ಕೇಳುತ್ತಿದ್ದುದುಂಟು. ಇವರ ನುಡಿಯಲ್ಲಿ ಎಲ್ಲ ರಿಗೂ ನಂಬುಗೆ ಇತ್ತು.

ಇವರು ಆಶೀರ್ವದಿಸಿದ, ಸಹಾಯ ಮಾಡಿದ ಅನೇಕ ವಿದ್ಯಾರ್ಥಿಗಳು ಇಂದು ದೊಡ್ಡ ದೊಡ್ಡ ಅಧಿಕಾರ ದಲ್ಲಿದ್ದಾರೆ. ಇವರು ಸಿದ್ಧಲಿಂಗೇಶ್ವರನಲ್ಲಿ ಪ್ರಸಾದ ಕೇಳಿ ಅತನು ಅಪ್ಪಣೆ ಇತ್ತರೇ ಕಾರ್ಯವನ್ನು ಮಾಡುತ್ತಿದ್ದರು. ಹೆಚ್ಚಿಗೆ ಹೇಳುವುದಾದರೆ ಈ ಇಪ್ಪತ್ತನೆಯ ಶತಮಾನಕ್ಕೆ ಒಬ್ಬ ಸಿದ್ಧ ಪುರುಷರಾಗಿದ್ದರು. ‘ಮೂರ್ತಿ ಚಿಕ್ಕದ್ದಾ ದರೂ ಕೀರ್ತಿ ದೊಡ್ಡದು’ ಎಂಬುದು ಇವರ ವ್ಯಕ್ತಿತ್ವಕೊ

ಸಲ್ಲುತ್ತದೆ. ತಾಳೆ ಹೂವು ಒಳಗಿದ್ದ ಸುಗಂಧ ಬೀರುವಂತೆ ಆಗಿ ಹೋದರು. ಇವರು ಆಡಂಬರಪವರಲ್ಲ, ಕಪಟಿಗಳಲ್ಲ. ಮುಗ್ಧ ಜೀವಿಗಳು. ವಜ್ರದ ಬೆಲೆ ಎಂದಿಗೂ ವಜ್ರದ ಬೆಲೆಯೇ ಆಗಿರುತ್ತದೆ. ಎಂಬುದು ಇವರನ್ನು ಜ್ಞಾಪಿಸಿಕೊಡುತ್ತದೆ.

ಸಿದ್ಧಲಿಂಗನ ಅಪ್ಪಣೆ ಇಲ್ಲದೆ ಹೋಗುತ್ತಿರಲಿಲ್ಲ ಎಂಬುದಕ್ಕೆ ಇದೊಂದು ಉದಾಹರಣೆ: ಅವರ ತಾಯಿ ಸತ್ತಾಗ ಪ್ರಸಾದ ಕೊಡದಿರಲು ಹೋಗಲೇ ಇಲ್ಲ. ಇದು ನಾನು ಕಣ್ಣಾರೆ ಕಂಡದ್ದು. ಅಲ್ಲದೆ ಎಲ್ಲಿಗಾದರೂ ಹೋಗಿ ನಾಲ್ಕಾರು ದಿನ ನಿಂತರೆ ಸಿದ್ಧಲಿಂಗೇಶ್ವರರ ಕರೆಯೇ ಬರುತ್ತಿತ್ತು. ಹಾಗೂ ನಿಂತರೆ ಅನಾರೋಗ್ಯ. ಸಿದ್ಧಗಂಗೆಗೆ ಬಂದೊಡನೆ ಪುನಃ ಆರೋಗ್ಯ ಎಂದಿನಂತೆ. ಅಂತೆಯೇ ಅವರು ಆಮರಣಾಂತ ಸಿದ್ಧಲಿಂಗೇಶನ ಪೂಜೆ; ಧ್ಯಾನಗಳಲ್ಲೇ ಕಳೆದರು. ನಿಷ್ಠಾವಂತತನ ಇವರದು; ಬಡವರಿಗೆ ಆದಷ್ಟು ಸಹಾಯ ಮಾಡಿದ್ದಾರೆ. ಈಗಿನ ಶ್ರೀ ನಿ॥ ಪ್ರ॥ ಶಿವಕುಮಾರ ಸ್ವಾಮಿಗಳು ವಿದ್ಯಾರ್ಥಿಗಳಾಗಿದ್ದಾಗ ಎಷ್ಟೋ ಸಾರಿ ಹಣ ಕೊಟ್ಟು ಕಳುಹಿಸಿದ್ದಾರಂತೆ. ಮಿಕ್ಕವರಂತೆ ತಿರುಗಿದವರಲ್ಲ. ಸಕಲ ತೀರ್ಥಕ್ಷೇತ್ರಗಳನ್ನೂ ಸಿದ್ಧಗಂಗೆಯಲ್ಲೇ ಕಂಡಿದ್ದಾರೆ. ಹೊರಗಿನ ಪ್ರಪಂಚದ ಗೊಡವೆಗೆ ಹೋಗದೆ ದೇವರ ಪೂಜೆ, ಧ್ಯಾನ, ಸಿದ್ಧೇಶ್ವರ, ಸಿಂಗಿರಾಜ, ಬಸವ ಪುರಾಣಗಳ ಪಠಣದಿಂದ ಕಾಲ ಕಳೆಯುತ್ತಿದ್ದರು.

ಯಾರ ಹತ್ತಿರವಾಗಲಿ ಸಂತೋಷವಾಗಿ ಮಾತಾಡುವುದು. "ಸ್ವಲ್ಪ ಪ್ರಸಾದ ತೆಗೆದುಕೊಂಡು ಹೋಗಿ" ಎನುವುದು ವಾಡಿಕೆಯಾಗಿತ್ತು. ಅಕ್ಕಪಕ್ಕದ ಹಳ್ಳಿಗೆ ಜನರ ಹಿಂಸೆ ತಡೆಯಲಾರದೆ ಒಮ್ಮೊಮ್ಮೆ ಹೋಗಿಬರುತ್ತಿದ್ದರು. ಇಷ್ಟೊಂದು ನಿಷ್ಠಾವಂತರಾದರೂ ಕೊನೆಗೆ ಸ್ವಾಮಿಗಳು ಅನಾರೋಗ್ಯಕ್ಕೆ ಗುರಿಯಾದರು. ವಿಧಿನಿಯಮವು ಯಾರನ್ನು ಬಿಡದು ಅಲ್ಲವೆ! ಇದರ ಕಾರಣ ವಾದರೊ ದೀಪ, ಧೂಪ, ಕರ್ಪೂರ, ಗಂಧದ ಕಡ್ಡಿಗಳ ಹೊಗೆಯ ಸೇವಿತವೇ ಆಗಿತ್ತು. ಪಾಪ! ಯಾವ ಆಸ್ಪತ್ರೆಯ ವೈದ್ಯರಿಂದಲೂ ಸಾಧ್ಯವಾಗದ ಪ್ರಯತ್ನವಾಯಿತು.

ಭಾನುವಾರ 31 - 3 - 68ರಂದು ಶ್ರೀಗಳು ಬೆಳಗಿನ ಜಾವ ಸುಮಾರು 4 - 30 ಘಂಟೆಗೆ ಸರಿಯಾಗಿ ಸಿದ್ಧಲಿಂಗೇಶ್ವರನ ಪಾದವನ್ನು ಸೇರಿದರು.

ಗಂಗಾಧರದೇವರು ದೇವರು; ಶಿವಶರಣರು; ಕಟ್ಟುನಿಟ್ಟಿನ ಬ್ರಹ್ಮಚಾರಿಗಳು. ಹೆಸರಿಗೆ ತಕ್ಕಂತೆ ದೇವರ ಸ್ಥಾನಕ್ಕೆ ಅರ್ಹರು. ಅಂತಹ ಶರಣರನ್ನು ಕಳೆದುಕೊಂಡಿದ್ದೇವೆ. ಅಂದಿನ ತನಕ ಸಿದ್ಧಲಿಂಗ ಪೂಜೆಯನ್ನು ಮಾಡಿದ, ಜವನಮ್ಮನವರ ಪುತ್ರ ಜವನದ ಸುಗಂಧನ್ನು ಬೀರುತ್ತಾ 'ಬಾ ಗೆಳೆಯ ಬಾ ಸಿದ್ಧಗಂಗೆಗೇ' ಎಂದು ಎಲ್ಲರನ್ನೂ ಸಲಿಗೆಯಿಂದ ಸ್ವಾಗತಿಸುತ್ತಿದ್ದ ಅವರು ಇಂದು ಸಿದ್ಧಗಂಗೆಯಲ್ಲಿಲ್ಲ. ಪುಣ್ಯಮಯ ಕೀರ್ತಿ ಮಾತ್ರ ಅಲ್ಲಿದೆ.

ಮೃತ್ಯು ಅಷ್ಟೊಂದು ಖಚಿತವಾಗಿರುವುದರಿಂದ ಮಹೋದ್ದೇಶವೊಂದಕ್ಕಾಗಿ ಜೀವವನ್ನು ತೆರುವುದು ಅತ್ಯಂತ ಮಹತ್ಕಾರ್ಯವೇ ಸರಿ.

ಜೀವನಹ್ರಸ್ವ, ಜಗತ್ತಿನ ಕೋರಿಕೆಗಳು ಕ್ಷಣಿಕ, ಇತರರಿಗಾಗಿ ಜೀವಿಸುವವರು ಮಾತ್ರ ಬದುಕಿದ್ದಾರೆ. ಉಳಿದವರು ಬದುಕಿರುವುದಕ್ಕಿಂತ ಹೆಚ್ಚಾಗಿ ಸತ್ತಿರುವುದೇ ಹೌದು.

— ಸ್ವಾಮಿ ವಿವೇಕಾನಂದ.

ಂಗಳೂರು ಜಿಲ್ಲಾ
ಜಯಪುರದಲ್ಲಿ ರಾಜ್ಯೋ
ವ ಸಮಿತಿಯವರು
ರ್ಪಡಿಸಿದ್ದ " ರಾಜ್ಯೋ
ವ " ಸಮಾರಂಭದಲ್ಲಿ
ಧ್ಯಕ್ಷತೆ ವಹಿಸಿ ಪೂಜ್ಯ
ಶ್ರೀಗಳವರು ಮಾತ
ಾಡುತ್ತಿರುವುದು. ಚಿತ್ರದ
ಡದಿಂದ ಬಲಕ್ಕೆ ಪೂಜ್ಯ
ವಿಪೂ ಮಠದ ಸ್ವಾಮಿ
ಳು, ಬೆಂಗಳೂರು
ರಕಾರಿ ಕಾಲೇಜ್
ಪ್ರಧ್ಯಾಪಕ ಶ್ರೀ ಸಾ. ಶಿ.
ರುಳಯ್ಯನವರು,
ಜಯಪುರ ಪುರಸಭಾಧ್ಯಕ್ಷ
ಚಿಕ್ಕಪ್ಪಯ್ಯಣ್ಣನವರು
ರಸಭಾ ಸದಸ್ಯ ಶ್ರೀ
. ಎನ್. ಬಸವರಾಜು
ವರು ಮತ್ತು ಶ್ರೀ
. ಎಲ್. ಸುಬ್ಬಯ್ಯ
ವರುಗಳನ್ನು ಕಾಣ
ಬಹುದು

Reg. No. RN/17139/69

# ವ್ಯವಸಾಯ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ

**ಶ್ರೀ ಸಿದ್ಧಗಂಗಾ ಕ್ಷೇತ್ರ, ತುಮಕೂರು ಜಿಲ್ಲೆ**

**ಫೆಬ್ರವರಿ — 1972**



ಧಾರ್ಮಿಕ, ಸಾಮಾಜಿಕ ಮತ್ತು ಶೈಕ್ಷಣಿಕ ಚಟುವಟಿಕೆಗಳಲ್ಲಿ ರಾಷ್ಟ್ರಖ್ಯಾತಿಯನ್ನು ಪಡೆಯುತ್ತಿರುವ ಕ್ಷೇತ್ರ ಶ್ರೀ ಸಿದ್ಧಗಂಗಾ. ಇಲ್ಲಿ ಪ್ರತಿ ವರ್ಷ ಶಿವರಾತ್ರಿ ಸಂದರ್ಭದಲ್ಲಿ ನಡೆಯುವ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಜಾತ್ರೆ ಸುಪ್ರಸಿದ್ಧ.

ಜಾತ್ರೆಯ ಸಂದರ್ಭದಲ್ಲಿ ಏರ್ಪಡಿಸಲಾಗುವ ವಸ್ತುಪ್ರದರ್ಶನದಲ್ಲಿ ರಾಜ್ಯ ಮತ್ತು ಕೇಂದ್ರ ಸರ್ಕಾರದ ನಾನಾ ಇಲಾಖೆಗಳು ಹಾಗೂ ಅನೇಕ ಖಾಸಗಿ ಸಂಘ-ಸಂಸ್ಥೆಗಳು ಪಾಲುಗೊಳ್ಳುತ್ತವೆ. ದಕ್ಷಿಣ ಭಾರತದ ನಾನಾ ಭಾಗಗಳಿಂದ ಜಾತ್ರೆಗೆ ಆಗಮಿಸುವ ಲಕ್ಷಾಂತರ ಜನಗಳಿಗೆ ಈ ವಸ್ತುಪ್ರದರ್ಶನ ಒಂದು ವಿಶೇಷ ಆಕರ್ಷಣೆ.

ಈ ಸಲದ ಪ್ರದರ್ಶನವನ್ನು ಎಂದಿಗಿಂತ ಹೆಚ್ಚು ವೈಶಿಷ್ಟ್ಯಪೂರ್ಣವಾಗಿ ನಡೆಸಲು ಎಲ್ಲ ಸಿದ್ಧತೆಗಳೂ ಭರದಿಂದ ನಡೆದಿವೆ. ಸರ್ಕಾರದ ಅಭಿವೃದ್ಧಿ ಕಾರ್ಯಕ್ರಮಗಳು ಮತ್ತು ಉದ್ಯಮಿಗಳ ವಾಣಿಜ್ಯ ಪ್ರಸಾರ ಹಾಗೂ ಪ್ರಚಾರಕ್ಕೆ ಇದೊಂದು ಸುವರ್ಣ ಅವಕಾಶ. ವಿಸ್ತಾರವಾದ ಬಯಲಿನಲ್ಲಿ ನಿರ್ಮಿತವಾಗುತ್ತಿರುವ ಪ್ರದರ್ಶನ ಮಳಿಗೆಗಳಲ್ಲಿ ತಮ್ಮ ಮಳಿಗೆಯನ್ನು ಸಕಾಲದಲ್ಲಿ ಕಾದಿರಿಸಿಕೊಳ್ಳಬೇಕಾಗಿ ಮನವಿ.

ಪುಣ್ಯ ಕ್ಷೇತ್ರದಲ್ಲಿ ನಡೆಯುವ ವಸ್ತುಪ್ರದರ್ಶನದಲ್ಲಿ ಪಾಲುಗೊಳ್ಳುವ ಅಭಿಮಾನ ತಮ್ಮದಾಗಬೇಕು. ತಮ್ಮ ಮಳಿಗೆಯನ್ನು ಕಂಡು ಆನಂದಿಸುವ ಅವಕಾಶ ಜನರಿಗೆ ದೊರೆಯಬೇಕು.

ಈ ಸಂಬಂಧ ಯಾವುದೇ ವಿವರಗಳಿಗೆ:

**ಕಾರ್ಯದರ್ಶಿ, ವಸ್ತುಪ್ರದರ್ಶನ ಸಮಿತಿ**
**ಶ್ರೀ ಸಿದ್ಧಗಂಗಾ ಕ್ಷೇತ್ರ, ತುಮಕೂರು ಜಿಲ್ಲೆ**

ಇವರೊಡನೆ ವ್ಯವಹರಿಸಿ